ಶ್ರೀರಂಗ ಸಾರಸ್ವತ-೧೪



# ಶೋಕಚಕ್ರ

ಶ್ರೀರಂಗ






ಶ್ರೀರಂಗ-ಸಾರಸ್ವತ-ಪ್ರಕಾಶನ

೧೯೫೬

-: ಸೂಚನೆ :-

ಈ ನಾಟಕವನ್ನು ರಂಗಭೂಮಿಗೆ ತರಬಯಸುವ ನಾಟ್ಯವಿಲಾಸಿಗಳು ಪ್ರತಿಯೊಂದು ಪ್ರಯೋಗಕ್ಕೆ ರೂ. 50/ನ್ನು ಕೊಟ್ಟು ಶ್ರೀಮತಿ ಶಾರದಾದೇವಿ ಆದ್ಯ ಇವರಿಂದ, "ಪಂಚವಟಿ", ಸಪ್ತಾಪುರ, ಧಾರವಾಡ, ಈ ವಿಳಾಸಕ್ಕೆ ಬರೆದು ಮುಂಚಿತ ಒಪ್ಪಿಗೆಯನ್ನು ಪಡೆಯತಕ್ಕದ್ದು.

-: ಎಚ್ಚರಿಕೆ :-



**ಬೆಲೆ: ಒಂದೂವರೆ ರೂಪಾಯಿ**

-: ಮುದ್ರಣ :-
ಬಿ. ಎಸ್. ನಾರಾಯಣರಾವ್
ಶ್ರೀ ಪ್ರಕಾಶ್ ಪ್ರಿಂಟರಿ, ನಾಗಸಂದ್ರ ರಸ್ತೆ
ಬಸವನಗುಡಿ, ಬೆಂಗಳೂರು-೪

# ಹಿನ್ನೆಲೆ

ಮಹಾತ್ಮಾ ಗಾಂಧಿಯವರ ಚಳವಳಕ್ಕೆ ಪ್ರಾರಂಭವಾದದ್ದು ೧೯೨೦ ರಲ್ಲಿ. ಆಗ ನನ್ನ ವಯಸ್ಸು ೧೬. ಆ ಮುಂಚೆ ೧೯೧೮-೯ರಲ್ಲಿ ಸ್ವಯಂ ಸೇವಕನಾಗಿ ಅವರನ್ನು ಹತ್ತಿರದಿಂದ ಕಂಡಿದ್ದೆ; ಮುಂದೊಮ್ಮೆ ೧೯೩೪ರಲ್ಲಿ ೨೦ ನಿಮಿಷಗಳ ವರೆಗೆ ಅವರ ಸಂದರ್ಶನವನ್ನು ಪಡೆದಿದ್ದೆ. ನಾನು ಗಾಂಧೀಯುಗದ ಯುವಕ ಎಂಬುದಕ್ಕೆ ಈ ಮಾತುಗಳನ್ನು ಕಾಣಿಸಿದ್ದೇನೆ.

ರಾಜಕೀಯಕ್ಕಿಂತ ಸಾಮಾಜಿಕ, ಅದಕ್ಕಿಂತ ಆಂತರಂಗಿಕ ಸುಧಾರಣೆ ಅಗತ್ಯ ಎಂಬುದನ್ನು ಆಗ ನಾನು ಕಲಿತುಕೊಂಡ ಪಾಠ. ೧೯೩೪ರಲ್ಲಿ ಆ ಬಗ್ಗೆ ಮಹಾತ್ಮರೊಡನೆ ಒಂದು ಚಿಕ್ಕ ಚರ್ಚೆಯನ್ನೇ ನಡೆಸಿದೆ. ಅಂದಿನಿಂದ ಇಂದಿನವರೆಗಿನ ನನ್ನ ಎಲ್ಲ ಬರೆಹಗಳನ್ನೂ ಜೀವನದ ಧೋರಣವನ್ನೂ ಅರಿತವರಿಗೆ ಇದಿಷ್ಟೆ ಹಿನ್ನೆಲೆ ಸಾಕು.

ಸ್ವಾತಂತ್ರ್ಯ ಪ್ರಾಪ್ತಿಯ ತರುವಾಯ ನಾನು ಬಹಳ ಆಶೆಯಿಂದ ಪರಿಸ್ಥಿತಿಯನ್ನು ನೋಡುತ್ತಲಿದ್ದೆ. ಯಾವುದೊ ಒಂದು ಕಾರಣಕ್ಕೆ ರಾಜಕೀಯ ಸ್ವಾತಂತ್ರ್ಯದ ಅವಸರವಿದ್ದು ಮಹಾತ್ಮಾಜಿಯವರು ಅದಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿದ್ದರು. ಈಗ ಆ ಜಂಜಾಟ ಮುಗಿಯಿತಲ್ಲ? ಸಾವಿರಾರು ವರ್ಷಗಳಿಗೊಮ್ಮೆ ಅವತರಿಸುವ ಭಗವಂತನ ಅಂಶದಂತಿದ್ದ ಮಹಾತ್ಮಾಜಿಯವರಿಂದ ನಿಜವಾದ—ಆಂತರಂಗಿಕ—ಸುಧಾರಣೆ ಜನತೆಯಲ್ಲಿ ಮೂಡುವುದಲ್ಲ? ಹೀಗೆ ಉತ್ಸಾಹಗೊಳ್ಳುತ್ತಿರುವಾಗ ಜನವರಿ ೩೦, ೧೯೪೮ರ ದುರ್ಘಟನೆ ನಡೆದುಹೋಯಿತು. "ಜಗತ್ತಿನ ದೀಪ ನಂದಿತು."

ಈ ಸಂದರ್ಭದ ಹಿನ್ನೆಲೆಯಲ್ಲಿ ದೇಶದ ಚುನಾವಣೆ, ಸ್ಥಾನಿಕ ಮುಂದಾಳುಗಳ ಸಾಂಸ್ಕೃತಿಕ ಮಟ್ಟ ಇದನ್ನೆಲ್ಲ ನೋಡಿ ಮೂಡಿದ ಭಾವ

ನೆಗಳೇ ಈ "ಶೋಕಚಕ್ರ" ನಾಟಕದಲ್ಲಿ ಮೂಡಿವೆ. ಇಲ್ಲಿಯ ಆಯಾ ಪಾತ್ರಗಳೇ ಪರಿಸ್ಥಿತಿಯನ್ನು ಚನ್ನಾಗಿ ಚಿತ್ರಿಸುವುವು (ಅವು ಹಾಗೆ ಚಿತ್ರಿಸ ಲಾರದಾದುವಾದರೆ, ಈ ನಾಟಕ ಅಯಶಸ್ವಿ ಎಂದು ನಾನು ಭಾವಿ ಸುತ್ತೇನೆ).

ಇದನ್ನು ಈಗಾಗಲೆ ನಾನು ಸಂಬಂಧಿಸಿದ್ದ ಕನ್ನಡ ನಾಟ್ಯವಿಲಾಸಿ ಗಳು ಮೂರು ಸಲ (ಒಮ್ಮೆ ರಾಯಿಚೂರಿನಲ್ಲಿ) ಆಡಿದ್ದಾರೆ, ಒಮ್ಮೆ ಮುಂಬಯಿ ರಾಜ್ಯದ ಸ್ಪರ್ಧೆಯಲ್ಲಿ ಆಡಿ ನಿರ್ಣಾಯಕರ (ಶ್ರೋತೃಗಳ ದಲ್ಲ) ಮೆಚ್ಚುಗೆಯನ್ನು ಪಡೆಯದೆ ಹೋಗಿದ್ದಾರೆ. ವ್ಯಕ್ತಿಚಿತ್ರವಾದ ನಾಟಕವನ್ನು ಬರೆದು ಅದನ್ನು ತಿಳುಹಿಸುವ ಪ್ರಯತ್ನವನ್ನು ಮುನ್ನುಡಿ ಯಲ್ಲಿ ಮಾಡುವುದು ನಾಟಕಕಾರನಿಗೆಯೆ ಅಗೌರವ. ಒಂದು ಮಾತನ್ನು ಹೇಳಬಹುದು; ಇದರಲ್ಲಿ ಯಾವ ಪಾತ್ರವೂ ಸಮಾಜದಲ್ಲಿಯ ಯಾವ ಒಂದು ವ್ಯಕ್ತಿಯ ಚಿತ್ರವಲ್ಲ. ಇದು ಕರ್ನಾಟಕದ ಮಾತ್ರ ರಾಜಕಾರಣದ ಟೀಕೆಯಲ್ಲ. ಇಂತಹ ಸಾಮಾಜಿಕ ಪ್ರವೃತ್ತಿಗಳನ್ನು ಭಾರತದಲ್ಲಿಯೆ ಯಾಕೆ, ಮನುಷ್ಯ ಸಮಾಜ ಇದ್ದಲ್ಲೆಲ್ಲ ಕಾಣಬಹುದು.

ಈ ನಾಟಕವನ್ನು ಅಚ್ಚುಹಾಕಿಕೊಟ್ಟ ಶ್ರೀ ಬಿ. ಎಸ್. ನಾರಾಯಣ ರಾವ್ ಇವರಿಗೆ, ಕರಡುಗಳನ್ನು ಪರಿಶ್ರಮದಿಂದ ತಿದ್ದಿಕೊಟ್ಟ ಶ್ರೀ ಬಿ. ಎಸ್. ರಾಮರಾವ್ ಇವರಿಗೆ ನಾನು ಋಣಿ.

೫/೨, ಕುಮಾರಾಪಾರ್ಕ ವೆಸ್ಟ
ಬೆಂಗಳೂರು-೩
೧೨ -- ೯೧ -- ೧೯೫೬

ಶ್ರೀರಂಗ

## —: ಪಾತ್ರಗಳು :—

ಪ್ರವೇಶದ ಕ್ರಮದಲ್ಲಿ

೧. ಗೋವಿಂದಪ್ಪ (ವಯಸ್ಸು ೪೬)
೨. ರಂಗಮ್ಮ ( ,, ೫೪)
೩. ಶಾಮು ( ,, ೨೮)
೪. ಹನ್ಮಂತಪ್ಪ ( ,, ೪೨)
೫. ಜಯರಾಯ ( ,, ೬೦)
೬. ವೆಂಕಣ್ಣ—ಪತ್ರಿಕಾ ಪ್ರತಿನಿಧಿ ( ,, ೩೬)
೭. ರಾಮಣ್ಣ
೮. ಶೀನಪ್ಪ
೯. ಸೆಕ್ರೆಟರಿ
೧೦. ಭೀಮಣ್ಣ

(೭–೧೦) ಹನ್ಮಂತಪ್ಪನ ಸಂಗಡಿಗರು ಸರಾಸರಿ ಸಮಾನ ವಯಸ್ಕರು

ಪ್ರಕಾಶನ
ಶ್ರೀಮತಿ ಶಾರದಾದೇವಿ ಆದ್ಯ
ಇವರಿಗಾಗಿ
ಶ್ರೀ ಬಿ. ಎಸ್. ರಾಮರಾವ್, ಪ್ರಜಾವಾಣಿ ಕಾರ್ಯಾಲಯ
ಬೆಂಗಳೂರು-೧-ಇವರಿಂದ ಪ್ರಕಾಶಿತವಾಗಿದೆ

ಈ ನಾಟಕವನ್ನು ಕನ್ನಡ ನಾಟ್ಯವಿಲಾಸಿಗಳು ಧಾರವಾಡದ ವಿಜಯ ಟಾಕೀಜ ಮಂದಿರದಲ್ಲಿ ರವಿವಾರ ತಾ॥ ೨೭-೪-೧೯೫೨ರ ಬೆಳಗಿನ ೯ ಗಂಟೆ ಮೊದಲ ಸಲ ರಂಗಭೂಮಿಗೆ ತಂದರು. ಆ ಪ್ರಯೋಗದಲ್ಲಿ ಪಾತ್ರವನ್ನು ವಹಿಸಿದ ವಿಲಾಸಿಗಳ ಹೆಸರು ಹೀಗಿವೆ:-

| ನಟವರ್ಗ | ಪಾತ್ರವರ್ಗ |
|---|---|
| ಶ್ರೀ ಜಿ. ವ್ಹಿ. ಹಿರೇಮಠ | ಗೋವಿಂದಪ್ಪ |
| ಕುಮಾರಿ ಪ್ರಮೀಲಾ ಸವಣೂರ | ರಂಗವ್ವಾ |
| ಶ್ರೀ ಎ. ಎನ್. ಜೋಶಿ | ಶಾಮು |
| ,, ಕೆ. ಜಿ. ಹಲಸಗಿ | ಹನ್ಮಂತಪ್ಪ |
| ,, ಡಿ. ಜಿ. ಕುಲಕರ್ಣಿ | "ಶಾಪೂರಕರ" |
| ,, ಎಸ್. ಡಿ. ಧರ್ಮಟ್ಟಿ | ವೆಂಕಣ್ಣ |
| ,, ಶ್ರೀರಂಗ | ಜಯರಾಯ |
| ,, ಎನ್. ಎಮ್. ಮಾಸೂರ | ರಾಮಣ್ಣ |
| ,, ಪಿ. ಜಿ. ಕುಲಕರ್ಣಿ | ಶೀನಪ್ಪ |
| ,, ಆರ್. ವ್ಹಿ. ಕುಲಕರ್ಣಿ | ಸೆಕ್ರೆಟರಿ |
| ,, ಕೆ. ಜಿ. ನಾಡಿಗೀರ | ಭೀಮಣ್ಣ. |

-:ಮಾರಾಟದ ಪೂರ್ಣಾಧಿಕಾರಿಗಳು:-

**ಸತ್ಯಶೋಧನ ಪುಸ್ತಕ ಭಂಡಾರ**

ಕೋಟೆ: ಬೆಂಗಳೂರು ೨

# ಶೋಕಚಕ್ರ

—೦—

## ಅಂಕ ೧.

[ಬೆಳಗಿನ ೭॥ ಗಂಟೆಯ ಸಮಯ. ಇಂದು ಅಗಸ್ಟ ೧೫-೧೯೪೭ನೆಯ ಇಸ್ವಿ. ರಂಗಸ್ಥಲದಲ್ಲಿ ಕಾಣುವದು ಜಯರಾಯರ ಮನೆಯ ಒಳ ಅಂಗಣದ ಎದುರಿನ ಭಾಗ. ಆದುದರಿಂದ ರಂಗದ ತುದಿಗೆ ನಾಲ್ಕು ಕಂಬಗಳು§ ಪ್ರೇಕ್ಷಕರ ಇದಿರಿನ ಗೋಡೆಯ ನಡುವೆ ಒಂದು ಬಾಗಿಲು ಕಾಣುವದು, ಎಡಬದಿಯ ಗೋಡೆಯ ಭಾಗಕ್ಕೆ ಸಾಲಾಗಿ ತೆಕ್ಕೆ-ಲೋಡುಗಳಿವೆ; ಬಲಬದಿಯ ಗೋಡೆಯ ಕಡೆ ಒಂದು ಇಳಿಜಾರಾದ ಡೆಸ್ಕ್ (ಸಣ್ಣ ಮೇಜು), ಅದರ ಹಿಂದೆ ಗೋಡೆಗೆ ಒಂದು ತೆಕ್ಕೆ. ಎದುರಿನ ಬಾಗಿಲಿನಿಂದ ಬಂದೊಡನೆ ಎಡಕ್ಕೆ ಗೋಡೆಯ ಗಂಟೆ ಒಂದು ಬಾಕು ಇದೆ. ಬಾಗಿಲ ಚೌಕಟ್ಟಿನ ಮೇಲೆ ಮಹಾತ್ಮಾಜಿಯವರ ದೊಡ್ಡ ಭಾವ ಪಟವಿದೆ. ತೆರೆ ಎದ್ದಾಗ ಮನೆಯ ಹೊರಗಿನಿಂದ "ಜನಗಣ ಮನ"ದ ಮೇಳ ಸಂಗೀತವು ಮನೆಯಿಂದ ದೂರ ಹೋದಂತೆ ಕೇಳಬರುವದು.

"ಜನ-ಗಣ ಮಂಗಲದಾಯಕ ಜಯಹೇ
ಭಾರತ ಭಾಗ್ಯವಿಧಾತಾ
ಜಯಹೇ ಜಯಹೇ ಜಯ ಹೇ
ಜಯ ಜಯ ಜಯ ಜಯಹೇ-ಭಾರತ ಭಾಗ್ಯವಿಧಾತಾ..ಆ..ಆ.."

ರಂಗಸ್ಥಲದಲ್ಲಿ ಡೆಸ್ಕಿನಮೇಲೆ ಎರಡೂ ಮೊಳಕೈಗಳನ್ನಿಟ್ಟು, ಅಂಗೈಗಳಿಂದ ಗದ್ದವನ್ನು ಹಿಡಿದುಕೊಂಡು, ಹೊರಗಿನ ಮೇಳ-ಸಂಗೀತದ ಕಡೆ ಲಕ್ಷ್ಯವಿದ್ದವನ ಕಳೆಯಿಂದ ಒಂದು ವ್ಯಕ್ತಿ ಕುಳಿತಿದೆ. ಸುಮಾರು ೪೬

---

§ರಂಗ ದಿಗ್ದರ್ಶಕರಿಗೆ ಒಂದು ಎಚ್ಚರಿಕೆ–ಪ್ರೇಕ್ಷಕರ ದೃಷ್ಟಿಗೆ ಅಡ್ಡಿಯಾಗದಂತೆ ಒಂದು ದಂಡೆಗೆ ತುಸು ಅಂತರದಲ್ಲಿ ಎರಡು; ಇನ್ನೊಂದು ಕಡೆ ಹಾಗೇ ಎರಡು, ನಿಲ್ಲಿಸಬೇಕು.

ವಯಸ್ಸು. ತಲೆಗೆ ಮಾಸಿದ ಗಾಂಧಿ ಟೊಪ್ಪಿಗೆ. ಮೈಯ್ಯಲ್ಲಿ ಗುಂಡಿಯನ್ನು ಹಾಕದ ಉದ್ದ ಬಿಳಿ ಕೋಟು, ಒಳಗೆ ಮೇಲಿನ ಗುಂಡಿಯನ್ನು ಹಾಕದಿದ್ದ ಬನಿಯನ್ ಎಲ್ಲವೂ ಖಾದಿಯದು—ತೊಟ್ಟ ಈ ವ್ಯಕ್ತಿಯ ಕಿವಿಯ ಮೇಲೆ ಒಂದು ಟಾಕು ಗಾಂಧಿ ಟೊಪ್ಪಿಗೆಗೆ ಸಮಾಂತರವಾಗಿಯೇ ತೂಗುತ್ತಿದೆ. ಸುತ್ತಲಿನ ಯಾವುದಕ್ಕೂ ಲಕ್ಷ್ಯವಿಲ್ಲದೆ ಈ ವ್ಯಕ್ತಿ ಕುಳಿತಾಗ ಬಾಗಿಲಿನಿಂದ ಎಂದರೆ ಮನೆಯ ಒಳಗಿನಿಂದ ಸುಮಾರು ೫೩-೫೪ ವಯಸ್ಸಿನ ಹೆಂಗಸು ಬರುವಳು. ಹಣೆ ತುಂಬುವಂತೆ ದೊಡ್ಡದಾಗಿ ಕುಂಕುಮ. ಮುಖದಲ್ಲಿ ಒಂದು ತರದ ಸಾತ್ವಿಕ ಕಳೆ—ಅದನ್ನು ನೋಡಿದರೆ ಮಕ್ಕಳಿಗಾಗಿ ಮಮತೆ ಇದ್ದೂ ಮಕ್ಕಳತಾಯಿ ಆಗದವಳು ಎಂದು ಹೊಳೆಯುವಂತೆ; ಕೈಯಲ್ಲಿ ಮಡಿಕೆ ಹಾಕಿದ ದೋತರ ಇದೆ. ಇಲ್ಲಿ ಯಾವ ಸದ್ದು ಇಲ್ಲದ್ದಕ್ಕೆ ಚಕಿತಳಾದವಳಂತೆ ಒಮ್ಮೆಲೇ ಬಾಗಿಲದ ಹತ್ತರವೇ ತಡೆದು]

ಹೆಂಗಸು:-ಅಯ್ಯ! ಎಲ್ಲಾರೂ ಹೋಗೇ ಬಿಟ್ಟರೊ ಏನೋ? ಸದ್ದೇ ನಿಂತಲ್ಲ?

ವ್ಯಕ್ತಿ:-(ಒಮ್ಮೆಲೇ ಲಕ್ಷ್ಯಕ್ಕೆ ಬಂದು) ಇಲ್ಲ, ರಂಗಮ್ಮನವರೇ, ಇನ್ನೂ ಯಾರು ಬಂದೇ ಇಲ್ಲ.

ರಂಗಮ್ಮ:-(ನೋಡಿ) ಗೋವಿಂದಪ್ಪಾ! ನೀವು ಇಲ್ಲೇ ಕೂತೀರೇನ:? ನನಗನ್ನಿಸಿತು ಯಾರೂ ಇಲ್ಲೇ ಇಲ್ಲೇನೂ ಅಂತ.

ಗೋವಿಂದಪ್ಪ:-ಹುಡುಗರು ಬಂದಿದ್ರು ಗುಂಪಾಗಿ. ಈಗ ಹಾಡಿಕೋತ ಹೋದ್ರು, ಅದನ್ನ ಕೇಳಿಕೋತ ಕೂತಿದ್ದೆ.

ರಂಗಮ್ಮ:-ನಾನೂ ಅದೇ ಕೇಳಿ ಬಂದೆ. ಬಂದರ್ಯಾಕ? ಮತ್ತ ಹೋದರ್ಯಾಕ? ಮತ್ತ ಇವರ್ನ ಕರೀಲಿಕ್ಕೇ ಬಂದಿದ್ದಿಲ್ಲ?

ಗೋವಿಂದಪ್ಪ:-(ಮುಗುಳು ನಗೆಯಿಂದ) ಹುಡುಗ್ರು ಅವರು, ರಂಗಮ್ಮ. ರಾಯರ್ನ ಕರೀಲಿಕ್ಕೆ ಸ್ವತಃ ಕಾಂಗ್ರೇಸ ಕಮೀಟಿಯ ಅಧ್ಯಕ್ಷರು, ಸೆಕ್ರೆಟರಿ, ಮೆಂಬರ ಜನ, ಎಲ್ಲ ಮೋಟರ ತಗೊಂಡು ಬರೋವ್ರಿದ್ದಾರ.

ರಂಗಮ್ಮ:-ಅಂದ್ರ ಇವರ್ನ ಮೋಟರದಾಗ ಕರಕೊಂಡು ಹೋಗವ್ರೇನು?

ಗೋವಿಂದಪ್ಪ:-(ಹೆಮ್ಮೆಯಿಂದ) ಇದನ್ನೇನ ಕೇಳ್ತೀರೀ, ರಂಗಮ್ಮ? ದೇಶಕ್ಕ ಸ್ವಾತಂತ್ರ್ಯ ಸಿಕ್ಕ ದಿವಸ ಇದು. ಜಯರಾಯರು ಅಂದ್ರ ಗಾಂಧಿ ಚಳವಳದೊಳಗಿನ ಹಿರೇರೊಳಗ ಒಬ್ಬರು. ಅವರ ಕೈಯಿಂದ ಧ್ವಜವಂದನ ಮಾಡಿಸೋವಾಗ ಅವರ್ನ ನಡಿಸಿಕೋತ ಹೋಗೋದ?

ರಂಗಮ್ಮ:-ಹೂಂ—(ಎಂದು ಉಸಿರೆಳೆದು, ಒಮ್ಮೆಲೆ ಮುಗುಳ್ನಗೆಯಿಂದ) ಇವರಿಗೆ ಗೊತ್ತೇ ಇಲ್ಲೋ ಏನೋ! ಎರಡೆರಡು ಸಲ ನಡೆಯುವದು ಬ್ಯಾಡ ಅಂತ ಮುಂಜಾನೆ ತಿರುಗಾಡಲಿಕ್ಕೆ ಹೋಗೋದನ್ನ ಬಿಟ್ಟೇ ಕೂತಾರ!

ಗೋವಿಂದಪ್ಪ:-ಅಂದ್ರ ರಾಯರ ತಯಾರಿ ಎಲ್ಲಾ ಆಗೇದೇನು?

ರಂಗಮ್ಮ:-(ಲಕ್ಷ್ಯವಿಲ್ಲದೆ)ಆಯ್ತು, ಮೋಟಾರದಾಗ ಹೋಗತಿದ್ರ ಯಾವ ಧೋತರಾ ಉಟ್ಟರೂ ಅಷ್ಟೇ.

ಗೋವಿಂದಪ್ಪ:-(ನಗೆಯಿಂದ) ಏನೂ? ಪ್ಯಾಂಟ ಹಾಕಿಕೋ ಬೇಕು ಅಂತ ಮಾಡ್ಯಾರೇನು ರಾಯರು ಮತ್ತ?

ರಂಗಮ್ಮ:-ಪ್ಯಾಂಟಂತೆ? ಕೆಳತನಕಾ ಧೋತರಾ ಉಟ್ಟರ ಸಾಕು. ''ಸಭಾದಾಗ ನಾಲ್ಕು ಮಂದಿಯ ಇದಿರು ನಿಂತ ಮಾತಾಡೋದು, ಈ ಹೊತ್ತಾದ್ರೂ ಮೊಳಕಾಲ ಮ್ಯಾಲಿನ ಧೋತರ ಬಿಟ್ಟು ಈ ಅಗಲ ಧೋತರ ಉಟ್ಟುಗೋರಿ'' ಅಂತ ಹೇಳಿದ್ರ, ''ಗಂಡಸಿನ ಬುದ್ಧಿ ಮೊಳಕಾಲ ಕೆಳಗ ಇಲ್ಲಾ, ಮುಚ್ಚಿಗೋಳಿಕ್ಕೆ'' ಅಂದ್ರು!

ಗೋವಿಂದಪ್ಪ:- (ಗಹಗಹಿಸುತ್ತ)ರಾಯರ ಮಾತಿನ ರೀತೀನೇ ಅದು.

ರಂಗಮ್ಮ:-ಬಿಡ್ರೀ ನಿಮು! ನೀವೂ ಅವರ್ಹಾಂಗೇ ಮಾತಾಡಬ್ಯಾಡ್ರಿ ಗೋವಿಂದಪ್ಪ! ''ಸ್ವರಾಜ್ಯ ಸಿಕ್ಕ ಮ್ಯಾಲೇ ಬುದ್ಧಿ ಬಂದಿತೇನೋ! ಅಂದೆ ನಾನೂ.

ಗೋವಿಂದಪ್ಪ:-(ಮತ್ತ ಗಹಗಹಿಸುತ್ತ) ಹ-ಹ-ಹ-ಹೀಂಗ ಅಂದಿರಾ? ಹ-ಹ-ಹ!

ರಂಗವ್ವ:-ಅಂದ್ರೇನೂ ಬಿಟ್ಟರೇನು ? ಸ್ವರಾಜ್ಯ ಬಂತು, ಬುದ್
ಬರಲಿಲ್ಲ! ನಾ ಅಂತೂ ಹೇಳಿಬಿಟ್ಟೆ, ನಾಯೇನು ಸಭಾಕ್ಕ ಬರೋವಾಕೆ ಅ
ಅಂತ.

ಗೋವಿಂದಪ್ಪ:-ರಂಗವ್ವನವರೆ, ನಿಮಗೂ ಹೋಗಬೇಕಾದೀತು
ಅವರೇನೂ ನಿಮಗ ಬಿಟ್ಟು ಹೋಗಲಿಕ್ಕಿಲ್ಲ.

ರಂಗವ್ವ:-ಯಾರಿಗೆ ಗೊತ್ತು ? ಜೇಲಿಗೇನೋ ತಂ ಜೋಡೀನ
ಕರಕೊಂಡು ಹೋದ್ರು, ಆದರ ಸಭಾಕ್ಕ—

ಗೋವಿಂದಪ್ಪ:-(ನಡುವೆಯೇ) ಅಲ್ಲಲ್ಲ, ರಂಗವ್ವನವರೇ, ರಾಯ
ಮಾತು ಹೇಳಲಿಲ್ಲ. ಕಾಂಗ್ರೇಸ ಕಮೀಟಿ ಅವರದು ಹೇಳಿದೆ. ನೀವ
ಸಭಾಕ್ಕ ಬರಬೇಕೂ ಅಂತ.

ರಂಗವ್ವ:-ಮುಂಜಾನೆದ್ದು ಸಭಾದಾಗ ಏನದರೀ ಹೆಂಗಸಿನ ಕೆಲಸ

ಗೋವಿಂದಪ್ಪ:-ಸ್ವಾತಂತ್ರ್ಯ ಸಿಕ್ಕ ದಿನ ಇದೂ—

ರಂಗವ್ವ:-ಅಯ್ಯ ! ಅದಕ್ಕ ನಾವೂ ನೀವೂ ಯಾಕ ಹಾರಾಡಬೇಕ
ಸಭಾದಾಗ ಸೇರಿ ? (ಮಹಾತ್ಮರ ಭಾವ ಪಟವನ್ನು ನೋಡುತ್ತ) ಅಲ್
ಕೂತಾನ ನೋಡ್ರಿ, ಆ ಮಹಾತ್ಮನ ಪುಣ್ಯಾ ಸ್ವರಾಜ್ಯ ಸಿಕ್ಕದ್ದು
(ಪಟಕ್ಕೆ ಭಕ್ತಿಯಿಂದ ಕೈ ಮುಗಿಯುವಳು)

[''ಗಾಂಧಿ ಮಹಾರಾಜ ಕೀ ಜೈ '' ಎಂದು ನಗೆಯಾಟದ ದನಿಯಲ್ಲಿ ನುಡಿ
ಯುತ್ತಾ ಮನೆಯೊಳಗಿನಿಂದ ೨೮-೩೦ ವಯಸ್ಸಿನ ಯುವಕನು ಬರುವನು.
ಸ್ವದೇಶೀ ಬಟ್ಟೆಯಾದರೂ ಕಪ್ಪು ಬಣ್ಣದ್ದಾದ ಪ್ಯಾಂಟು, ಗೆರೆಯಿದ್ದ ಬಟ್ಟೆಯ
ಶರ್ಟು, ಕೆಂಪು ಬಣ್ಣದ ನೆಕ್ ಟೈ; ತಲೆಗೂದಲನ್ನು ಅಂದವಾಗಿ ಬಾಚಿ
ಕೊಂಡಿದ್ದಾನೆ ]

ಯುವಕ:-(ನಗೆಯಿಂದ) ರಾಕ್ಷಸರನ್ನು ಓಡಿಸಿ ಸ್ವಾತಂತ್ರ್
ತಂದದ್ದಕ್ಕೆ ಆರತಿ ಮಾಡತೀಯೇನ ಗಾಂಧಿ ಮಹಾತ್ಮಗೆ ? ಅಂ ?
ಹೌದೇನ ಅವ್ವಾ ?

ರಂಗವ್ವ:-ಅಂಥಾ ಪುಣ್ಯಾತ್ಮನ ಮುಖದ ಮುಂದ ಆರತೀ ಬೆಳ

ಕಾದರೂ ಕಂಡೀತೇನು?

ಯುವಕ:-(ಅತ್ತಿತ್ತ ನೋಡುತ್ತ) ಯಾಕರೀ ಗೋವಿಂದಪ್ಪ, ಇನ್ನೂ ನಿಮ್ಮ ವಾನರ ಸೇನಾ ಬಂದಿಲ್ಲೇನು?

ಗೋವಿಂದಪ್ಪ:-(ಬೆರಗಾಗಿ) ಯಾರು ಬಂದಿಲ್ಲಾ ಅಂದಿರಿ, ಶಾಮರಾಯರ?

ಶಾಮು:-ನಿಮ್ಮ ಹನುಮಂತಪ್ಪನ ತಾಂಡೇದ ಜನಾ ಬಂದಿಲ್ಲೇನು? ಅಂದೆ.

ರಂಗಮ್ಮ:-ಸಾಕೋ! ಸುಮ್ಮನಿರು! ನಿನಗಂತೂ ಬರೇ ಮಂದಿಗೇ ಆಡೋದರಾಗೇ ಸುಖ!

ಶಾಮು:-ಅವ್ವಾ, ನೀವೆಲ್ಲಾರೂ ಸಭಾಕ್ಕ ಹೋಗತಿದ್ರ ಮನೆಯ ಕೀಲೀ ಕೈ ನನಗೆ ಕೊಟ್ಟು ಹೋಗರಿ.

ರಂಗಮ್ಮ:-ಯಾಕೋ? ನೀ ಹೋಗೋದಿಲ್ಲೇನು?

ಶಾಮು:-(ನಗುತ್ತ) ಮನೆಯ ಕೀಲಿಯ ಕೈ ಸಿಗೋದಂದ್ರ ನಿಜವಾದ ಸ್ವಾತಂತ್ರ್ಯ ಅದು.

ರಂಗಮ್ಮ:-(ನಕ್ಕು) ಮುದಕೀಗೆ ಹೇಳಿ ಏನು ಉಪಯೋಗ? ಹೇಳೀ ಅಂತ ನಾಳೆ ಕೈ ಹಿಡಿದಾಕೆಗೆ. (ಒಳಗೆ ಹೋಗುತ್ತ) ಕೀಲೀ ಕೈ ಕೊಡತಾಳೋ ಏನು ಕೀಲೀನೇ ಕೊಡತಾಳೋ! (ಒಳಗೆ ಹೋಗುವಳು.)

[ಶಾಮು ಕಣ್ಣೊಳಗೆ ಆದರ-ಪ್ರೇಮಗಳು ತುಂಬಿ ತಾಯಿ ಹೋಮದನ್ನು ದಿಟ್ಟಿಸುತ್ತ ಕೆಲವು ನಿಮಿಷ ನಿಂತು, ಉಸಿರೆಳೆದು ಬಂದು ಬಾಕಿಸ ಮೇಲೆ ಕುಳಿತು ಅಂಗೈಗಳನ್ನು ಮೊಳಕಾಲ್ಗಳ ಮೇಲಿಟ್ಟು ಕೆಲಹೊತ್ತು ಗೋವಿಂದಪ್ಪನನ್ನೇ ದಿಟ್ಟಿಸುತ್ತ ಆಮೇಲೆ ಉಸಿರೆಳೆದು]

ಶಾಮು:-ವೀರ ಮಾತೆ, ವೀರ ಸುತ... ಇಬ್ಬರೂ ವೀರ ಇದ್ದರ ಹೀಂಗಾಗತದ ನೋಡರಿ, ಗೋವಿಂದಪ್ಪ.

ಗೋವಿಂದಪ್ಪ:-(ಮಾತಿನ ಸುಳಿವು ಹೊಳೆಯದೆ) ಹ-ಹ! ಹ-ಹ-ಹ!

ಶಾಮು:-ತಂದೆ, ತಾಯಿ, ಮಗ—ಮೂರೂ ಮಂದಿ ಸ್ವಾತಂತ್ರ್ಯದ ಸಲುವಾಗಿ ಒಂದೇ ವ್ಯಾಳ್ಯಾಕ್ಕ ಜೇಲಿಗೆ ಹೋದಿವಿ, ಆದರೂ ಸ್ವಾತಂತ್ರ್ಯದ ಉತ್ಸವಕ್ಕ ಮೂರೂ ಮಂದಿ ಒಂದೇ ವ್ಯಾಳ್ಯಾಕ್ಕ ಹೋಗಲಿಕ್ಕೆ ಮನಸಿಲ್ಲ... ಹೊಂ (ಎಂದು ನಿಳುತ್ತ ಸಾವಕಾಶವಾಗಿ ಹೆಜ್ಜೆಗಳನ್ನಿಡುತ್ತ ಎದುರಿನ ತೆಕ್ಕೆಗಳ ಕಡೆ ನಡೆಯುವನು)

ಗೋವಿಂದಪ್ಪ:-(ಅಧೈರ್ಯದ ದನಿಯಲ್ಲಿ) ಅಂದ್ರ—ನೀವು ಬರೇನ ಬರೋದಿಲ್ಲೇನು ಇಂದಿನ ಧ್ವಜವಂದನಕ್ಕ ?

ಶಾಮು:-(ಗೊಣಗುತ್ತ) ಝಂಡಾ ಊಂಚಾ ರಹೇ ಹಮಾರಾ (ಒಮ್ಮೆಲೆ ತಿರುಗಿ ನಿಂತು) ಹಮಾರಾ ಅಂದ್ರ ನಮ್ಮದು, ನಿಮ್ಮದಲ್ಲ ಮತ್ತೆ. (ಕಿಡಿಗೇಡಿತನದ ನಗೆಯಿಂದ ನೋಡುವನು.)

ಗೋವಿಂದಪ್ಪ:-ನಮ್ದು ! ನಿಮ್ದು ! ಅದೊಂದು ಕಾಟ ತಪ್ಪಿತು ನೋಡ್ರಿ, ಶಾಮುರಾಯರ, ಪಾಕಿಸ್ತಾನ ಬ್ಯಾರೆ ಆಗಿ. ಇನ್ನೇನು ? ಜಯರಾಯರು ಹೇಳೂ ಹಂಗ ದೇಶ ತುಂಡಾಗಬಾರದಿತ್ತು. ಆದರೂ ಸ್ವಾತಂತ್ರ್ಯವು ಸಿಕ್ಕಿತು ಅಂಬೋದು ಮುಖ್ಯ—

ಶಾಮು:-ಆಂ ? "ಸ್ವಾತಂತ್ರ್ಯ ಸಿಕ್ಕಿತು" ? ಯಾರು ? ಅಪ್ಪನೂ ಹೀಂಗೇ ಅಂತಾರ, ಸ್ವಾತಂತ್ರ ಸಿಕ್ಕಿತೂ, ಅಂತ ?

ಗೋವಿಂದಪ್ಪ:-(ಚಕಿತನಾಗಿ) ಅಂದ್ರ ? ಯಾಕ ? ಸ್ವಾತಂತ್ರ್ಯ ಸಿಕ್ಕಿತೂ ಅಂಬೋದು—

ಶಾಮು:-(ನಡುವೆಯೇ) "ಸಿಕ್ಕಿತು" ಅಲ್ಲರೀ, "ಗಳಿಸಿದಿವಿ" ಅನ್ನಿರಿ...ಹಂ... ಸಾಲೀ ತಪ್ಪಿಸಿ ತಿರುಗುವ ಹುಡುಗನಿಗೆ ಬೀದೀವಳಗ ಸಿಕ್ಕ ಪದವೇ ಹಂಗ ಸ್ವಾತಂತ್ರ್ಯ ಸಿಕ್ಕಿತು ಅಂತೀರೋ ಏನು ? (ಮುಗುಳು ನಗೆಯಿಂದ) "ಗಳಿಸಿದಿವಿ" ಅನ್ನಿರಿ; ಮಾತಿನಾಗಾದರೂ ಗಂಡಸ್ತನ ಇರಲಿ.

ಗೋವಿಂದಪ್ಪ:-(ನಿಳುತ್ತ) ನನಗೇನ ತಿಳಿದೀತರಿ, ಶಾಮುರಾಯರ, ಈ ರಾಜಕಾರಣ ? ರಾಯ್ರು ಅಂತಾರ, ಅವರ ಮಾತಿನಾಗ ನಂ ವಿಶ್ವಾಸ, ನಾನೂ ಅಂತೀನಿ.

ಶಾಮು:-ಅಂತೂ ನಿಮ್ಮ ದಕ್ಷತನದ ಜವಾಬದಾರೀ ರಾಯರದೇ ಅನ್ನಿರಿ (ಎನ್ನುತ್ತ ಒಂದು ತೆಕ್ಕೆಗೆ ಆತುಕೊಂಡು ಕೂಡ್ರುವನು)

ಗೋವಿಂದಪ್ಪ:-ಶಾಮುರಾಯರ, ಒಂದು ಮಾತು ಹೇಳ್ತೀನಿ ನಾನು; ೨೫-೨೬ ವರ್ಷದ ಹಿಂದಿನ ಮಾತು. ಅದೇ ಮುಲ್ಕೀ ಪರೀಕ್ಷೆ ಪಾಸಾಗಿರ ಬಹುದು ನಾನು. ಆಗ ನಮ್ಮೂರಿಗೆ ಬಂದ್ರು ರಾಯ್ರು, ಜಯರಾಯ್ರು. ಆಗಿನ ಕಾಲದಾಗ ಜಯರಾಯ್ರು ಅಂದ್ರ ಜಿಲ್ಲಾಕ್ಕ ದೊಡ್ಡ ವಕೀಲರು; ಮನೀಯಿಂದ ಕೋರ್ಟಿಗೆ ಹೋಗ್ಬೇಕಾದ್ರ ನೂರು-ನೂರು ರೂಪಾಯಿಯ ನೋಟ ಕೊಡಬೇಕಾಗ್ತಿತ್ತು ರಾಯ್ರಿಗೆ. ಅಂಥಾ ವೈಭವ! ಆದರೆ ಅಂದು ಕಾಲ ನಡಿಗೆಯಿಂದೇ ಬಂದ್ರು ನಮ್ಮೂರಿಗೆ... ಊರೊಳಗ ಲೆಕ್ಚರ್ ಇಟ್ಟರು. ರಾಯರ್ನ ಹುಡುಕಿಕೊಂಡು ಪೋಲೀಸರೂ ಬಂದಿದ್ದರು. ಲೆಕ್ಚರ ಮುಗೀತು, ಹಿಡಿದುಕೊಂಡು ಹೋದ್ರು ರಾಯರ್ನ. ನಿಮಗ ಹೇಳ್ತೀನಿ, ಶಾಮುರಾಯರ, ಪೋಲೀಸರು ಹಿಡಿದುಕೊಂಡು ಹೋಗುವಾಗ ರಾಯರ ಮುಖದ ವ್ಯಾಲೆ ಇದ್ದ ಶಾಂತ, ಸಾತ್ವಿಕ ಕಳೆ ನೋಡಿಯೇ ನಾನು ಚಳವಳಿ ಸೇರಿದೆ. ಅಂದಿನ ರಾಯರೇ ಇಂದಿಗೂ ನನಗೆ ರಾಯ್ರು. ಅವರ ಮಾತು ಅಂದ್ರ ನನಗ ವೇದವಾಕ್ಯ. (ಗೋವಿಂದಪ್ಪನ ಕಂಠ ಕೊನೆ ಕೊನೆಗೆ ಗದ್ಗದಿತವಾಗುತ್ತಿದೆ. ಅದನ್ನು ನೋಡಿ ಶಾಮುನು ಬೆರಗಾಗುತ್ತಾನೆ. ಗೋವಿಂದಪ್ಪನು ಟೊಪ್ಪಿಗೆಯನ್ನು ತೆಗೆದು ಮತ್ತೆ ಹಾಕಿಕೊಳ್ಳುವಂತೆ ನಟಿಸುತ್ತಾನೆ.)

[ಒಂದು ಕ್ಷಣ ರಂಗಸ್ಥಲದಲ್ಲಿ ನೀರವತೆ.]

ಶಾಮು:-ಹುಂ... ಅಂತೂ ನಾವು ಪೋಲೀಸರನ್ನ ತಪ್ಪಿಸಿ ಓಡಾಡಿದು ಚಳವಳ ಅಲ್ಲ ಅನ್ನಿರಿ.

ಗೋವಿಂದಪ್ಪ:-ಹಾಂಗ ಹ್ಯಾಂಗ ಅನ್ನಲಿಕ್ಕೆ ಬಂದೀತು? ಒಂದೊಂದು ಕಾಲಕ್ಕೆ ಒಂದೊಂದು ರೀತಿ....ಆಗ ತಮ್ಮ ತಮ್ಮ ಮನೀಮಾರೂ ಬಿಟ್ಟು ಜೇಲಿಗೆ ಹೋಗೋದು ದೊಡ್ಡ ಗುಣ ಅನ್ನಿಸಿತ್ತು. ಈಗ ಜೇಲ ಬಿಟ್ಟು ಮಂದೀ ಮನೆಮಾರು ಸುಡೋದು ದೊಡ್ಡ ಗುಣ ಅನ್ನಿಸ್ತು ..ಆದರ ನನ್ನ ವಿಶ್ವಾಸ ರಾಯರ ಮ್ಯಾಲೆ ಯಾಕೆ ಅಂಬೋದನ್ನ ಹೇಳಿದೆ, ಇಷ್ಟೆ.

ಶಾಮು:-(ನಗೆಯಾಟದಿಂದ)ಏನೇ ಇರಲಿ ಸ್ವಾತಂತ್ರ್ಯ ಸಿಕ್ಕದ್ದು ರಾಯರ ಕಾಲದ ಚಳವಳದ ಪುಣ್ಯಾದಿಂದೇ ಅನ್ನಿರಿ.

ಗೋವಿಂದಪ್ಪ:-(ತಲೆದೂಗುವಷ್ಟರಲ್ಲಿಯೇ)

ಶಾಮು:-ನಾವು ಗುಂಡಿಗೆದೆ ಕೊಟ್ಟು ಹೋರಾಡಿದ್ದು ನಿಂ ಪುರಾಣದೊಳಗಿನ ಅಡ್ಡ ಕಥೆ ಅನ್ನಿರಿ...ಆಂ ?

ಗೋವಿಂದಪ್ಪ:-(ನೊಂದುಕೊಂಡು) ಛೆ—ಛೆ--!-ಶಾಮುರಾಯರ (ಒಳಗಿಂದ ''ಶಾಮೂ'' ಎಂದು ಜಯರಾಯರ ದನಿ)

ಶಾಮು:-(ತಟ್ಟನೆ ಎದ್ದು)ಬಂದೆ, ಅಪ್ಪಾ. (ಒಳಗೆ ಹೊರಡುತ್ತ) ನೋಡಿರಿ, ಹಿರೇರಿಗೆ ಎಂಥಾ ವಿಧೇಯ ಇದ್ದೀನಿ ನಾನು! (ಎನ್ನುತ್ತ ಸೋಗಿನ ನಮ್ರತೆಯಿಂದ ಕೆಳಗೆ ಮುಖ ಮಾಡಿ, ಕಳ್ಳನೋಟದಿಂದ ಗೋವಿಂದಪ್ಪನನ್ನು ನೋಡುತ್ತ ಒಳಗೆ ಹೋಗುವನು.)

[ಶಾಮುನು ಹೋದುದನ್ನೇ ನೋಡುತ್ತ ನಿಂತ ಗೋವಿಂದಪ್ಪನ ಲಕ್ಷ್ಯವು ಬಾಗಿಲ ಮೇಲಿದ್ದ ಮಹಾತ್ಮರ ಭಾವ ಪಟದ ಕಡೆ ಹೊರಳುವದು. ಒಂದೆರಡು ನಿಮಿಷ ಅದನ್ನೇ ದಿಟ್ಟಿಸಿ ನೋಡುತ್ತ]

ಗೋವಿಂದಪ್ಪ:-(ಭಕ್ತಿಭಾವದಿಂದ)ನೂರು ವರ್ಷ ಬಾಳು ಮಹಾತ್ಮಾ! ನಿನ್ದೆ ಪುಣ್ಯ ಇದೆಲ್ಲ. (ಎಂದು ತಲೆವಾಗಿ ನಮಸ್ಕರಿಸುವನು.)

[ಹೊರಗಿನಿಂದ ''ಗೋವಿಂದಪ್ಪ'' ಎಂಬ ಕರೆ. ಗೋವಿಂದಪ್ಪನು ಚಕಿತನಾಗಿ ಮುಖವೆತ್ತಿ ಭಾವಪಟವನ್ನೂ ನೋಡುವನು. ಮತ್ತೆ ಹೊರಗಿನಿಂದ ದನಿ. ದನಿ ಹೊರಗಿನಿಂದ ಬಂದುದೆಂದು ಈಗ ತಿಳಿದ ಗೋವಿಂದಪ್ಪನು ತಿರುಗಿ ನಿಂತು— ಎದುರು ನೋಡುತ್ತ—]

ಗೋವಿಂದಪ್ಪ:-ಬರ್ರಿ, ಬರ್ರಿ, ಹನ್ಮಂತಪ್ಪ. (ಎಂದು ಲಗುಬಗೆಯಿಂದ ಸಾವರಿಸುವ ಸಿದ್ಧತೆಯಲ್ಲಿ ತೊಡಗುವನು.)

[ಹನ್ಮಂತಪ್ಪನು ಬರುವನು. ಮುಖದಿಂದ ಬೆವರು ಸುರಿಯುತ್ತಿದೆ. ಮುಖದಲ್ಲಿ ಆಯಾಸದ, ಅದಕ್ಕಾಗಿ ಬಂದ ಕೋಪದ ಕಳೆ ಇದೆ.]

ಹನ್ಮಂತಪ್ಪ:- (ಅತ್ತಿತ್ತ ನೋಡಿ) ಎಲ ! ಇಲ್ಲಿ[illegible]ಂದಿಲ್ಲ ? ಯಾರೂ ಬಂದಿಲ್ಲ ?

ಗೋವಿಂದಪ್ಪ;-ರಾಯರೂ ತಯಾರೇ ಇದ್ದಾರ. ಕರೀತೀನಿ. ಕೂತುಗೋರಿ.

ಹನ್ಮಂತಪ್ಪ:-ತಡಿಯೋ, ಗೋವಿಂದಪ್ಪ...ಎಂಥಾ ಮಂದಿ ಇದೂ ಅಂತೀನಿ ! ಅಲ್ಲಿಯಾದರೂ ಯಾರು ಇದ್ದಾರೋ. ತಯಾರಿ ಮಾಡ್ಯಾರೊ ಇಲ್ಲೊ ! ಥೂ ! ಗೋವಿಂದಪ್ಪ (ಕೈಗಿದ್ದ ಬಂಗಾರದ ರಿಸ್ಟವಾಚನ್ನು ನೋಡಿ) ಹಂ---ಇನ್ನೂ ಎಂಟು ಹೊಡೆದಿಲ್ಲ. ನಾ ಅಲ್ಲೇ ಭರ್ ಅಂತ ಹೋಗಿಯೇ ಬರ್ತೀನಿ. (ಹೊರಡುತ್ತ) ರಾಯ್ರಿಗೆ ಹೇಳು, ಹತ್ತು ಮಿನಿಟಿನಾಗ ಮೋಟರ ತೊಗೊಂಡು ಬರ್ತೀನಿ ಅಂತ. (ತುಸು ತಡೆದು ನಿಂತು) ಅಂದ್ರ, ಗೋವಿಂದಪ್ಪ, ನೀವೊಂದು ಕೆಲಸಮಾಡು...

ಗೋವಿಂದಪ್ಪ:- (ಖುಷಿಯ ಮುದ್ರೆಯಿಂದ,) ಹೇಳ್ರಿ, ಹನ್ಮಂತಪ್ಪ

ಹನ್ಮಂತಪ್ಪ:-(ಹೊರಗೆ ನೋಡುತ್ತ) ಶಾಪೂರಕರ... ಶಾಪೂರ...(ಎಂದು ಕೂಗುವನು)

ಗೋವಿಂದಪ್ಪ:-ಯಾರು ಇದ್ದಾರೇನ ನಿಂ ಜೋಡಿ ?

ಹನ್ಮಂತಪ್ಪ:- (ನಕ್ಕು) ಮತ್ಯಾರು ? ನಂ ಶಾಪೂರಕರ---

[''ಶಾಪೂರಕರ'' ಬರುವನು. ಇವನು ಮೋಟರ ಡ್ರೈವ್ಹರ. ಖಾದಿಯ ವೇಷ. ಬಿಳಿ ಗಾಂಧಿ ಟೊಪ್ಪಿಗೆ, ಗೆರೆಯು ಬಟ್ಟೆಯ ಷರ್ಟ, ಖಾಕಿ ಬಣ್ಣದ ಅರ್ಧ ಚಣ್ಣ. ಕೈಯ್ಯಲ್ಲಿ ದೊಡ್ಡದೊಂದು ಮಾಲೆಯನ್ನೂ-ಹೂ ಗೊಂಚಲನ್ನೂ ಹಿಡಿದಿದ್ದಾನೆ. ಅವನ್ನು ಎರಡೂ ಕೈಗಳಿಂದ ಹಿಡಿದುದಕ್ಕೆ ಅವನ ಮುಖ ಸರಿಯಾಗಿ, ಪೂರ್ತಿಯಾಗಿ ಕಾಣುವುದಿಲ್ಲ.]

ಹನ್ಮಂತಪ್ಪ:-ಎಲೆ ನಿನ! ಮೈನಾಗಿ ಹಿಡಕೊಂಡ ಬರಬಾರದ್ದ ? ಇಪ್ಪತ್ತ-ಮೂವತ್ತ ರೂಪಾಯಿ ಮಾಲೆ ಅಂದ್ರ ಸವಣೂರ ಎಲಿ ಹಂಗ ಮುದ್ದಿ ಮಾಡಿಕೊಂಡು ತರ್ತೀಯಲ್ಲೊ ? ಕೊಡು ಅವರ ಕೈಯಾಗ ! ಗೋವಿಂದಪ್ಪ, ಇವನ್ನಿಲ್ಲೇ ಇಟ್ಟಿರ್ತೀನಿ. (ಶಾಪೂರಕರ ಇನ್ನು ಮಾಲೆ

ಯನ್ನು ಬಿಟ್ಟಿಲ್ಲ ಎಂದು ನೋಡಿ ಸಿಟ್ಟಿನಿಂದ) ಏ-ಹುಚ್ಚೊಗ್ಟೇ-ನಿಂ ತಲ್ಯಾ
ಸಿಕ್ಕೇತಿ ನೋಡು ಆ ಜರದ ಧಾರ! ಥೂ-ನಿನ! (ಎಂದು ಜೋರಿನಿಂ
ಜಗ್ಗುವಾಗ ಕೈಗೆ ಹತ್ತುವದು. ಸಂತಾಪದಿಂದ) ದುಃಖ್ಖ!(ಎಂದು ಕೈ ಜಾಡಿಸ
ವನು.)

ಗೋವಿಂದಪ್ಪ:-(ಕಳಕಳಿಯಿಂದ) ಎಲೆಲೆ ಬೊಟ್ಟಿಗೆ ರಕ್ತ ಬಂತಲ್ಲರೀ

ಹನ್ಮಂತಪ್ಪ:-(ಕೈಗೆ ಕೈ ತಿಕ್ಕುತ್ತ) ಇರ್ಲಿ, ಬಿಡು, ಗೋವಿಂದಪ್ಪ
ದೇಶ ಕಾರ್ಯಕ್ಕೆ ರಕ್ತ ಸುರಿಸೋ ಚಟಾನೆ ಬಿದ್ದದ ನಮಗ. ("ಶಾಪೂರಕರ
ನಿಗೆ) ನಡಿ, ನಡಿ, ಗಾಡಿ ತಿರುವಿಕೊಂಡು ಬಾ. (ಅವನು ಹೋಗುವನು.

ಗೋವಿಂದಪ್ಪ:-(ಮೊದಲಿನಂತೆ) ಒಂದು ತಣ್ಣೀರಿನ ಪಟ್ಟಿ ಆದ್ರೂ
ತರ್ತೀನ್ರಿ ಹನ್ಮಂತಪ್ಪ

[''ಹನ್ಮಂತಪ್ಪಗೇನು" ಅನ್ನುತ್ತ ಶಾಮು ಬರುವ.]

ಶಾಮು:-(ನಗೆಯಿಂದ) ಏನು, ಹನ್ಮಂತಪ್ಪ, ತಲಿಗೆ ತಣ್ಣೀರ ಪಟ್ಟಿ
ಕಟ್ಟಿಗೊಳ್ಳೊತನಕ ಬಂತೇನು ಸರತಿ ?

ಗೋವಿಂದಪ್ಪ:-ಅಲ್ಲಲ್ಲ-

ಹನ್ಮಂತಪ್ಪ:-ನಿನ್ನ ಹಂಗ ತಲೀಕೆಟ್ಟು ಸೊಶಾಲಿಸ್ಟ ಆಗಿಲ್ಲ ನಾನು,
ಶಾಮಣ್ಣ.

ಶಾಮು:-ಅದೊಂದು ಚಿಂತೆ ನಿನಗಿಲ್ಲ ಹನ್ಮಂತಪ್ಪ...

[ಇವರಿಬ್ಬರ ಮಾತು ನಡೆದಾಗ ಗೋವಿಂದಪ್ಪ ಮಾಲೆಯನ್ನೂ, ಗೊಂಚ
ಲನ್ನೂ ಬಾಕಿನ ಮೇಲೆ ಇಡುತ್ತಿರುತ್ತಾನೆ.]

ಹನ್ಮಂತಪ್ಪ:-ಮತ್ಯಾವ ಚಿಂತೆಪ ? ಈಗೇನು ಕಡಿಮೆ ಅವ, ಚಿಂತಿ ?

ಶಾಮು:-ಅದಕೇ ಹೇಳ್ತೀನಿ. ತಲಿ ಇತ್ತಂದ್ರ ಮತ್ತೆ ಅದೂ ಕೆಟ್ಟೀ
ತನ್ನೋ ಚಿಂತೆ.

ಹನ್ಮಂತಪ್ಪ:-(ನಕ್ಕು) ಕೆಲಸ ಮಾಡೋವ್ರಿಗೆ ಕೈ ಬೇಕು. ತಲಿ
ಇದ್ದರೇನು; ಬಿಟ್ಟರೇನು ? ಯಾಕಪ, ಗೋವಿಂದಪ್ಪ ?

ಶಾಮು:-(ಗೋವಿಂದಪ್ಪನನ್ನು ನೋಡುವಾಗ ಮಾಲೆಯನ್ನು ನೋಡಿ) ಎಲ ! ಇದೇನು ?

ಗೋವಿಂದಪ್ಪ:-ಅದೇ ಅವರ ಕೈಗೆ ಹತ್ತಿ ರಕ್ತ ಬಂತು, ತಣ್ಣೀರ ಪಟ್ಟಿ ಕಟ್ಟ ಬೇಕೂ ಅಂತ...

ಶಾಮು:-(ಹನ್ಮಂತಪ್ಪನಿಗೆ) ಎಷ್ಟು ವರ್ಷದ ಮಾಲೆ ಇದು, ಹನ್ಮಂತಪ್ಪ ?

ಹನ್ಮಂತಪ್ಪ:-(ತಿಳಿಯದೆ) ಅಂದ್ರ ?

ಶಾಮು:-ಅಲ್ಲ, ಇಷ್ಟು ದೊಡ್ಡದು. ಇದರ ವಯಸ್ಸು ೨೦-೨೫ ಆದ್ರೂ ಇರಬೇಕು. ...ಅಲ್ಲ, ಅಂದ್ರ, ನಮ್ಮ ತಂದೆ ರಾಜಕಾರಣ ಬಿಟ್ಟು ಅಷ್ಟು ವರ್ಷ ಆತು. ಆಗ ಹಾಕಬೇಕಾಗಿದ್ದ ಮಾಲೀನೇ ಈಗ ಬೆಳೆದು ನಿಂತದೇನೋ ಅಂತ !

ಹನ್ಮಂತಪ್ಪ:-ಹೋಗೋ ನಿನ ! ಏನಂತಾನೋ ಅಂತ ಮಾಡಿದ್ದೆ ! (ಕೈಗಡಿಯಾರವನ್ನು ನೋಡಿ) ಎಲೆ ! ಎಂಟಕ್ಕ ಹತ್ತು ಮಿನಿಟು ! (ಹೊರಗೆ ನೋಡಿ) ಶಾಪೂರಕರ ! (ಎಂದು ಕೂಗುವನು.)

ಶಾಮು:-(ನಗುತ್ತ) ಶಾಪೂರಕರ ಅಂದ್ರಿ? ಅವಗ ಅದೇ ಹೆಸರು ಕೊಟ್ಟಿ ಟ್ಟಿಯಾ ?("ಶಾಪೂರಕರ" ಬರುವನು.)

ಹನ್ಮಂತಪ್ಪ:-(ಶಾಮುನಿಗೆ) ಗಾಡಿಮುಕಾ ತಿರಗಿಸಿ ನಿಲ್ಲಿಸೀದ್ಯಾ ? (ಅವನು ತಲೆ ತೂಗಲು) ಎಲೆ ನಿನ ? ಇಲ್ಲಿ ಬಂದು ಹೇಳ್ಬೇಕು ನನಗೆ ?... ನಡೀ ಸ್ಟಾರ್ಟಮಾಡು...ಗಡಾನೆ. ! (ಶಾಪುರಕರನು ಹೋಗುವನು. ) (ಶಾಮುನಿಗೆ) ಯಾಕ ? ಹೆಸರು ತಪ್ಪೇನು ?

ಶಾಮು:-ತಪ್ಪಲ್ಲ, "ಶೋಫರ" ಅನ್ನೊ ಹೆಸರು...

ಹನ್ಮಂತಪ್ಪ:-ಅದೂ ಸಾಹೇಬರು ಹೇಳೋದು. ಯಾಕಂದ್ರ, ಆ ಕೆಂಪು ಮೋತಿಯೊಳಗಿನ ನಾಲಗೆಗೆ ಶಾಪೂರಕರ ಅಂತ ಅನ್ನಲಿಕ್ಕೆ ಬರೋದಿಲ್ಲ ! ಅಬ್ಬಬ್ಬ ! ನನಗ ಹೇಳ್ತೇನು. ಏಳೇಳು ಗಡಾನೆ ಅಂಗೀ ತೊಟ್ಕೊಗೋ. ಬರ್ತೀನಿ ನಾ ಮೋಟರ ತಕ್ಕೊಂಡು ಕರೀಲಿಕ್ಕೆ. ರಾಯರ ಜೋಡಿ ಬಂದೀ

ಯಂತೆ. (ಅವಸರವಸರವಾಗಿ ಹೋಗುವನು. ಹೊರಗೆ “ಶಾಪೂರಕರ-ಶಾಪೂರಕರ ಎಂಬ ಕೂಗು, ಮೋಟಾರು ಹೊರಡುವ ಸದ್ದು ಕೇಳಿಬರುವದು. ಆ ಸದ್ದು ಕೇಳದಷ್ಟು ದೂರ ಹೋದಾಗ—)

ಶಾಮು:-(ಎಚ್ಚೆತ್ತವನಂತೆ) ಭಲೆ ! (ಗೋವಿಂದಪ್ಪನಿಗೆ) ಹ್ಯಾಗದ ಆಸಾಮಿ ?

ಗೋವಿಂದಪ್ಪ:-(ಹಾರಿಕೆಯ ರೀತಿಯಲ್ಲಿ)ಕೆಲಸಕ್ಕ ಬಹಾಳ ಗಟ್ಟಿ... ಅಂದ್ರ ನೀವೂ ಸಭಾಕ್ಕ ಬರ್ತೀರಲ್ಲ ?

ಶಾಮು:-ಸಭಾದಾಗ ಮಂದೀ ಎದುರು ನಿಲ್ಲೂವಷ್ಟು ಗಟ್ಟಿ ನಾ ಅಲ್ಲ, ಗೋವಿಂದಪ್ಪ.

ಗೋವಿಂದಪ್ಪ:-ನೀವು ! ಹ-ಹ ! (ಶಾಮುನು ನೋಡಲು ಮತ್ತಿಷ್ಟು ಪೊಳ್ಳು ನಗೆಯನ್ನು ಹೇಕರಿಸುವನು.)

(“ಹೊರಡೋಣೇನೋ, ಗೋವಿಂದಪ್ಪ” ಎಂದು ಕೇಳುತ್ತ ಜಯರಾಯರು ಒಳಗಿನಿಂದ ಬರುವರು.)

(ಜಯರಾಯರಿಗೆ ಸುಮಾರು ೬೦-೬೫ ವಯಸ್ಸಿರಬಹುದು. ಆದರೆ ಮುಖದಲ್ಲಿ ಮುಪ್ಪಿನ ಬಳಲಿಕೆಯ ಕಳೆಯು ಇಲ್ಲ. ವಿಶೇಷವಾಗಿ ಕಣ್ಣುಗಳು ಇನ್ನೂ ತೇಜಃಪುಂಜವಾಗಿವೆ. ವೇಷ ಪೂರ್ತಿಯಾಗಿ ಶುಭ್ರ ಖಾದಿ. ಧೋತರ ಲಂಡ ಪಾದದಷ್ಟು. ತುಸು ಸರಿದಾಡಿದಲ್ಲಿ ಎರಡೂ ಮೊಳಕಾಲ್ಗಳು ಕಾಣುವವು. ಮೈಯಲ್ಲಿ ಕುತ್ತಿಗೆಯ ವರೆಗೆ ಗುಂಡಿಗಳಿದ್ದ ಕೋಟು. ತಲೆಯ ಮೇಲೆ ಬಿಳಿ ಗಾಂಧಿ ಟೊಪ್ಪಿಗೆ, ಉಪ್ಪರಣಿಯನ್ನು ಮಡಚಿ ಮಫ್ಲರದಂತೆ ಕುತ್ತಿಗೆಗೆ ಸುತ್ತಿ ಎರಡು ಭಾಗದ ಮೇಲಿಂದ ಹಿಂದೂ ಮುಂದೂ ಬಿಟ್ಟಿದ್ದಾರೆ. ಮುಖದಲ್ಲಿದ್ದ ಶಾಂತ ಕಳೆ ಅವರ ಮಾತಿನ ಶೈಲಿಯಲ್ಲಿಯೂ ಕಂಡು ಬರುವದು.)

ಜಯರಾಯ:-ಹೊರಡೋಣ— (ಒಮ್ಮೆಲೆ ನೆನಪಿಗೆ ಬಂದು) ಎಲ ! ಕೊಡೆ ಮರೆತು ಬಂದೆ, ಗೋವಿಂದಪ್ಪ! ನನ್ನ ಕೊಡೆ ತಕ್ಕೊಂಡು ಬರ್ತೀಯಾ ?

ಶಾಮು:-(ಬೇಗದಿಂದ ಬಿಟ್ಟು ಬಾರದಂತೆ ಒಳಗೆ ಹೋದ ಗೋವಿಂದಪ್ಪನನ್ನು ತಡೆಯುತ ಚಾಪ್ಲೀವದಿಂದ)ಕೊಡೆ ಏನು ಬ್ಯಾಡ.(ಅಷ್ಟರಲ್ಲಿ ಗೋವಿಂದಪ್ಪನು ಒಳಗೆ ಹೋಗಿಯೇ ಬಿಟ್ಟಿರುವನು.) [illegible] ಬರ್ತಿಸ್ರಿ ಕರೀಲಿಕ್ಕೆ—

ಜಯರಾಯ:-ಸುಮ್ಮಸುಮ್ಮನೆ ಕರೀಲಿಕ್ಕೆ ಬರೋ ಹಾದೀ ನೋಡೋದ್ಯಾಕ ? ಹೋಗಿ ಬಿಟ್ಟರಾಯಿತು.

ಶಾಮು:-ಛೇ ! ಛೇ ! ಹನ್ಮಂತಪ್ಪ ಇಲ್ಲೀ ತನಕ ಬಂದು ಹೇಳಿ ಹೋಗ್ಯಾನ, ಮೋಟರ ತಕ್ಕೊಂಡು ಬರ್ತಾನಂತ, ಅಲ್ಲಿ ತನಕಾ ಹೋಗ ಬಾರ್ದಂತ—

ಜಯರಾಯ:-ಏನು ಹುಚ್ಚ ಇದ್ದಾನ ಈ ಹುಡುಗಾ. (ಶಾಮನು ತಂದೆಯನ್ನು ನೋಡುವನು. ಆದರೆ ಅವನ ಕಡೆ ಲಕ್ಷ್ಯವಿಲ್ಲದೆ ವಾಕ್ಯವನ್ನು ಮುಗಿಸುವವನಂತೆ) ಹನ್ಮಂತಾ ?

[ಒಮ್ಮೆಲೆ ಹೊರಗಿನಿಂದ ನೆಹ್ರು ಶರ್ಟ ಪೈಜಾಮು ತೊಟ್ಟ—ಬರಿತಲೆಯ ವ್ಯಕ್ತಿಯೊಂದು ಬರುವದು. ।ಶರ್ಟಿನ ಎಡಗಡೆಯ ಎದೆಯ ಮೇಲಿನ ಕಿಸೆಗೆ ತುಂಬ ಫೌಂಟನ ಪೆನ್ನುಗಳೂ ಪೆನ್ಸಿಲುಗಳೂ ಸಿಕ್ಕಿಕೊಂಡದ್ದು ಕಾಣುವವು. ವ್ಯಕ್ತಿಯ ವಯಸ್ಸು ಸುಮಾರು ೩೬ ಇರಬಹುದು. ಬಂದವನೆ—]

ವ್ಯಕ್ತಿ:-ಜಯಹಿಂದ (ಎಂದು ಜಯರಾಯರಿಗೆ ನಮಸ್ಕರಿಸುವನು.)

ಜಯರಾಯ:-(ಅವನನ್ನು ನೋಡಿ) ಬಾರೊ ಯಾಕೊ ?

ವ್ಯಕ್ತಿ:-(ಭಗೀರಥನ ತಲೆಯಮೇಲೆ ಆಕಾಶದಿಂದ ಬೀಳುವ ಗಂಗೆಯ ಹಾಗೆ ವೇಗದಿಂದ ಮಾತನಾಡುತ್ತ) ಜಯರಾಯರಿಗೆ ಜಯವಾಗಲಿ. ನಾಡಿನ ಸ್ವಾತಂತ್ರ್ಯೋದಯದ ಈ ಶುಭ ಮುಹೂರ್ತದಲ್ಲಿ ಜನನಾಯಕ ಜಯರಾಯರಿಗೆ ರಣಹಲಗೆ ತನ್ನ ಅನಂತಾನಂತ ವಂದನೆಗಳನ್ನೂ ಶುಭೇಚ್ಛೆಗಳನ್ನೂ ಸಮರ್ಪಿಸಿ—

ಜಯರಾಯ:-(ಮುಗುಳ್ನಗೆಯಿಂದ) ಯಾಕೊ, ವೆಂಕಣ್ಣಾ, ಈ ವೇಷ ಯಾಕ ?

ವೆಂಕಣ್ಣ:-(ನಮ್ರತೆಯಿಂದ) ಜಯರಾಯರ, ನಾನೀಗ ರಾಷ್ಟ್ರೀಯ ಉಜ್ವಲ ಪತ್ರಿಕೆಯಾದ ರಣಹಲಗೆಯ ವಿಶೇಷ ಸುದ್ದಿಗಾರ ಎಂದು ತಮ್ಮ ಸಂದರ್ಶನವನ್ನು ತೆಗೆದುಕೊಳ್ಳಲು ಬಂದಿದ್ದೇನೆ.

ಜಯರಾಯ:-(ಶಾಮುನಿಗೆ) ಅಂದ್ರ ಕೂಡ್ರೊಣ ಅಂತೀಯಾ

ಹನ್ಮಂತಪ್ಪ ಬರೋತನಕಾ?(ಎನ್ನುತ್ತ ಸಾವಕಾಶವಾಗಿ ನಡೆದು ಬಂದು ತೆಕ್ಕೆಗೆ ಆತು ಕುಳಿತುಕೊಳ್ಳುವರು.)

ಗೋವಿಂದಪ್ಪ:-(ಬಂದು) ಕೊಡೆ ತಂದೆ, ರಾಯರೆ!

ಜಯರಾಯ:-ಅಲ್ಲಿಯು ತನಕ ಇಟ್ಟುಬಿಡು ಅದನ್ನ.

[ಗೋವಿಂದಪ್ಪನು ಬಾಕಿನ ಹತ್ತರ ಇಡಲು ಹೋದಾಗ ಅವನನ್ನು ನೋಡುತ್ತಿದ್ದ ರಾಯರ ದೃಷ್ಟಿ ಹಾರದ ಮೇಲೆ ಬಿದ್ದು]

ಜಯರಾಯ:-(ತಿಳಿಯದೆ)|ಏನೊ ಇದು! ಈ ಹಾರ ಎಲ್ಲಿಂದ ಬಂದಿತು?

ಶಾಮು:-ಹನ್ಮಂತಪ್ಪ ತಂದಿಟ್ಟಾನ.

ವೆಂಕಣ್ಣ:-(ಪೈಜಾಮದ ಕಿಸೆಯೊಳಗಿಂದ ಒಂದು ನೋಟಬುಕ್ಕನ್ನು ತೆಗೆದು ಅವಸರವಸರವಾಗಿ ಬರೆದುಕೊಳ್ಳುತ್ತ) ಸೂರ್ಯೋದಯದ ಸಮಯಕ್ಕೆ ಅರಳುವ ಕಮಲಗಳಂತೆ ತೇಜಃಪುಂಜವಾಗಿ ಕಂಗೊಳಿಸುವ ಹೂಗಳಿಂದ ಮಾಡಿದ ಒಂದು ಭವ್ಯಮಾಲೆ ಕಾಲಿಟ್ಟೊಡನೆಯೆ ಕಣ್ಣೆದುರು—

ಜಯರಾಯ:-ಏನ ಹುಚ್ಚ ಇದ್ದಾನ ಈ ಹುಡುಗಾ(ವೆಂಕಣ್ಣ ತಡೆದು ನೋಡುವನು. (ಅವನ ಕಡೆ ಲಕ್ಷ್ಯವಿಲ್ಲದೆ ವಾಕ್ಯವನ್ನು ಮುಗಿಸುವಂತೆ) ಹನ್ಮಂತ?

ಶಾಮು:-(ಕೆಣಕುವ ದೃಷ್ಟಿಯಿಂದ ವೆಂಕಣ್ಣನನ್ನು ನೋಡುತ್ತ ತಂದೆಗೆ) ಈ ಸುದ್ದಿಗಾರರಿಗೆ ಸಂದರ್ಶನ ಬೇಕಂತೆ. ಹನ್ಮಂತಪ್ಪ ಬರೋದರೊಳಗ ಮುಗಿಸಿ ಬಿಡಬಹುದಲ್ಲ?

ಜಯರಾಯ:-(ಕಿಸೆಯಲ್ಲಿ ಕೈಹಾಕಿ) ಎಲಲ! ನನ್ನ ಚಾಳಿಸೀ ಮರೆತು ಬಂದೆ.

ಗೋವಿಂದಪ್ಪ:-ತರ್ತೀನಿ, ರಾಯರೆ (ಒಳಗೆ ಹೊರಡುವನು.)

ಜಯರಾಯ:-ನೆಟ್ಟಗ ಎಲ್ಲಾ ಕಡೆ ನೋಡೋ, ಗೋವಿಂದಪ್ಪ! ನಿನ್ನೆ ರಾತ್ರೀನೇ ಸಿಕ್ಕಿದ್ದಿಲ್ಲ ಅದು. (ವೆಂಕಣ್ಣನಿಗೆ) ಕೂಡೊ, ವೆಂಕಣ್ಣಾ.

ವೆಂಕಣ್ಣ:-(ಶಾಮುನನ್ನು ನೋಡುತ್ತ) ನನಗೆ ರಾಯರದೊಂದು special interview ಬೇಕಾಗೇದ...

ಶಾಮು:-(ನಕ್ಕು) ಸರಳ ಮಾತಾಡಬಾರ್ದ? ಹೋಗಂತ ಹೇಳು, ಹೊರಟೆ.

ಜಯರಾಯ:-(ನಕ್ಕು) ಅಷ್ಟು ಸರಳ ಮಾತಾಡಿದರ ಪೇಪರದ ಪುಟ ತುಂಬಬೇಕ ಹ್ಯಾಂಗ? ಯಾಕೊ, ವೆಂಕಣ್ಣಾ?

ಶಾಮು:-(ವೆಂಕಣ್ಣನಿಗೆ) ನನ್ದೂ ಫೋಟೊ ಬೇಕಾಗಿದ್ದರ ಕರಿ, ಆ ವ್ಯಾಲೆ ಬರ್ತೀನಿ ನಾನು. (ಹೋಗುವನು.)

ವೆಂಕಣ್ಣ:-(ಬರೆದುಕೊಳ್ಳಲು ಸಜ್ಜಾಗುತ್ತ, ಬಾಕಿನ ಮೇಲೆ ಕುಳಿತು ರಾಯರನ್ನೇ ಎದುರಿಸುತ್ತ) ನಾನು ಕೆಲವು ಪ್ರಶ್ನೆ ಕೇಳತೀನಿ ರಾಯರಿಗೆ, ಅದಕ್ಕ ಉತ್ತರ ಕೊಡಬಹುದಲ್ಲ?

ಜಯರಾಯ:-ವೆಂಕಣ್ಣಾ, ಹುಚ್ಚು ಹಿಡಿದದ ಏನ ನಿನಗೆ? ನಮ್ಮ ಕಾಲ ಮುಗೀತು. ಇನ್ನು ನಮ್ಮನ್ನ ತಕೊಂಡು ಏನ್ಮಾಡ್ತೀದಿ?

ವೆಂಕಣ್ಣ:-(ಗಂಭೀರ ಧನಿಯಲ್ಲಿ) ಅಲ್ಲ. ಸ್ವಾತಂತ್ರ್ಯೋದಯ ಅಂದರೆ ಗಾಂಧಿಯುಗದ ಪ್ರಾರಂಭ ಎಂದು ರಣಹಲಗೆಯ ಅಭಿಪ್ರಾಯವಾಗಿದೆ. ರಾಮರಾಜ್ಯದ ರಕ್ತವರ್ಣದ ಸೂರ್ಯ ಕಿರಣಗಳು ಕಂಗೊಳಿಸುವ ಪ್ರಾತಃ ಕಾಲವಿದು. ಅಂತಹ ಒಂದು ಕಿರಣ ತಾವು, ಎಂದು ರಣಹಲಗೆ ನಂಬಿದೆ.

ಜಯರಾಯ:-ಹಂ... ಪ್ರಶ್ನೆಗಳನ್ನು ಬರೆದುಕೊಂಡು ಬಂದೀದಿಯೋ ಏನು ಹೀಗೇ ಬಾಯಿಂದ ಕೇಳುವಿಯೋ?

ವೆಂಕಣ್ಣ:-(ಉತ್ತೇಜಿತನಾಗಿ) ಬರೆದುಕೊಂಡು ಬಂದೀನಿ.

ಜಯರಾಯ:-ಕೇಳು ಹಾಗಾದರ; ಯಾಕಂದರೆ, ನಿನ್ನ ಬಾಯಿ ಮಾತಿಗೆ ತಾಳ-ತಂತಿ ಇದ್ಧಾಂಗೇ ಇಲ್ಲ. ಆಂ? (ನಗೆಯಿಂದ ನೋಡುವರು, ಅವನನ್ನು)

ವೆಂಕಣ್ಣ:-ರಾಯ್ರು, ಮೊದಲನೆಯ ಪ್ರಶ್ನೆ. ಸ್ವಾತಂತ್ರ್ಯ ಸಿಕ್ಕದ್ದಕ್ಕ ನಿಮಗ ಏನು ಅನ್ನಿಸ್ತದ? ಅಲ್ಲ, ಅಂದ್ರ ನಿಮ್ಮ... first and spontaneous reaction ಏನು ಅಂತ?

ಜಯರಾಯ:- (ಚಕಿತನಾದವನಂತೆ) "ಏನು ಅನ್ನಿಸ್ತದ?" ಅಂದ್ರ—ಏನು ?—ನಿನಗ ಬೇಕಾದದ್ದೇನು ?

ವೆಂಕಣ್ಣ:-(ಅಧೈರ್ಯದಿಂದ) ಅಲ್ಲ–ಅಂದ್ರ–ಸಂತೋಷ, ಉತ್ಸಾಹ ಅನ್ನಿರಿ, ಒಂದು ತರದ ಹೆಮ್ಮೆ–a kind of elation for the goal achieved ?

ಜಯರಾಯ:-(ನಕ್ಕು) ಹುಚ್ಚು ಹಿಡಿದದ ಏನು ನಿನಗ, ವೆಂಕಣ್ಣ ? ಗೋಲ್ ಏನೂ ? ಅಚೀವ್ಡ್ ಏನು ?

ವೆಂಕಣ್ಣ:-(ಬೆರಗಾಗಿ) ಯಾಕ ? ೨೫-೩೦ ವರ್ಷದ ಚಳವಳಕ್ಕ ಕಡಿಗೆ ಯಶಸ್ಸು ಸಿಕ್ಕಿತು, final victory—

ಜಯರಾಯ:-(ತನ್ನಷ್ಟಕ್ಕೆ ವಿಚಾರ ಮಾಡುವವನಂತೆ) ಹುಂ...ಹಂ.... ಅದಕೇ ನಿನಗೆ ಮೊದಲಿಗೇ ಹೇಳಿದೆನಲ್ಲ, ವೆಂಕಣ್ಣಾ, ನಾನು ಹಳೆಕಾಲದವ ಅಂತ....ನೀ ಯಾವುದಕ್ಕ ಯಶಸ್ಸು ಸಿಕ್ಕಿತೂ ಅಂತೀ ಅದೇ ನನಗ ತಿಳೀವಲ್ಲದು.

ವೆಂಕಣ್ಣ:-Victory for Gandhism,... for the Mahatma's movement—'ಗಾಂಧಿವಾದ'...ಗಾಂಧಿಚಳವಳ ಇವೆರಡೂ—

ಜಯರಾಯ:-(ನಡುವೆಯೆ) ಅವೆರಡೂ ಬ್ಯಾರೆ, ವೆಂಕಣ್ಣಾ, ಗಾಂಧಿವಾದ, ಗಾಂಧಿ ಚಳವಳ ಅನ್ನೊ ಎರಡೂ ಬ್ಯಾರೆ; ಒಂದರ ಸಂಬಂಧ ಒಂದಕ್ಕಿಲ್ಲ. (ಏಳಲು ತೊಡಗುವನು.)

[ವೆಂಕಣ್ಣನು ಏನೂ ತಿಳಿಯದಾಗಿ ಪೆಚ್ಚು ಕಳೆಯಿಂದ ರಾಯರನ್ನು ನೋಡುವನು. ರಾಯರು ಅವನನ್ನೆ ಶೂನ್ಯದೃಷ್ಟಿಯಿಂದ ನೋಡುತ್ತ ಏಳುವರು.]

ಜಯರಾಯ:-(ಏಳುತ್ತಲೆ) ಎರಡೂ ಬ್ಯಾರೆ. (ಎದ್ದು) ಹಾಂಗ ಕೇಳಿದರ ಎರಡೂ ಒಂದೇ. (ಮೆಲ್ಲಗೆ ಅತ್ತಿತ್ತ ತಿರುಗಾಡುತ್ತ) ನಮಗ ಈ ಸ್ವಾತಂತ್ರ್ಯ ಅನ್ನೋದರ ಅರ್ಥನೇ ಗೊತ್ತಿಲ್ಲ ! ಗಾಂಧಿಜಿಯವರು ನಮಗ ಹೇಳಿಕೊಟ್ಟದ್ದು...ಸ್ವರಾಜ್ಯ. ಸ್ವರಾಜ್ಯ ಇನ್ನೂ ಬಂದಿಲ್ಲ.—(ಒಮ್ಮೆಲೇ ತಿರುಗಿ ನಿಂತು ವೆಂಕಣ್ಣನನ್ನು ಎದುರಿಸಿ) ವೆಂಕಣ್ಣಾ, ಸ್ವಾತಂತ್ರ್ಯ

ಬಂದಿತು, ಸ್ವರಾಜ್ಯ ಬಂದಿಲ್ಲ. (ಮತ್ತೆ ನಡೆಯುತ್ತ ತನ್ನಷ್ಟಕ್ಕೆ ಎಂಬಂತೆ) ಸ್ವರಾಜ್ಯ ಬರಲಿಲ್ಲ; ಹೃದಯದಲ್ಲಿ ಹ್ಯಾಂಗ ಬದಲಾವಣೆ ಆಗಬೇಕಂತಿದ್ರು ಮಹಾತ್ಮಾಜಿಯವರು, ಅದರ ವಿರುದ್ಧ ಬದಲಾವಣೆ ಆಗೇದ. ಸತ್ಯದ ರಾಜ್ಯ ಸ್ವರಾಜ್ಯ, ಅದಿನ್ನೂ ಬಂದಿಲ್ಲ. ಪ್ರಾಮಾಣಿಕತೆ ಅಂದ್ರ ಅಹಿಂಸಾ, ಅದೂ ಇನ್ನೂ ಬಂದಿಲ್ಲ...ಹುಂ...(ಎನ್ನುತ್ತ ಹಾಗೇ ತಿರುಗಾಡುವನು.)

ವೆಂಕಣ್ಣ:-Of course, ಅಲ್ಲ - ಅಂದ್ರ—ಈಗ ಸ್ವಾತಂತ್ರ್ಯ ಸಿಕ್ಕಿತು, ಇನ್ನು ವ್ಯಾಲೆ ನೀವು ಹೇಳೋ ಹಂಗ ಸ್ವರಾಜ್ಯ ತರಬಹುದು ಅಂತ—ಅಂದ್ರ, ನನ್ನ ಪ್ರಶ್ನೆ [ಕಾಗದವನ್ನು ನೋಡಿಕೊಂಡು] my second question comes to your own point, sir... ಬ್ರಿಟಿಶರು ಹೋದರು...

ಜಯರಾಯ:-[ತಿರುಗಿ ನಿಂತು ನಡುವೆಯೆ] ಹೌದಪಾ, ಆದರೆ ಅದಕ ಉತ್ಸವ ಯಾಕೆ? ಮನೆಯೊಳಗಿನ ಹೆಗ್ಗಣ ಹೊರಗೆ ಹೋದರೆ ಅಂಗಣ ದೊಳಗ ಕುಣಿದಾಡಬೇಕೊ—ಏನು ಇದ್ದ ಹೋರನ್ನು ಮೊದಲ ಮುಚ್ಚ ಬೇಕೊ ?

ವೆಂಕಣ್ಣ:-ಹೆ-ಹೆ-ಹೆ! That's a good one [ಬರೆದುಕೊಳ್ಳುತ್ತ] "ಮನೆಯೊಳಗಿನ ಹೆಗ್ಗಣಾ .. ಮುಚ್ಚಬೇಕೊ"? [ಗೊಣಗುವನು]

ಜಯರಾಯ:-ಅದಕೇನ ಹೇಳಿದೆ ನಮ್ಮ ಕಾಲ ಮುಗೀತು-ಅಂತ.

ವೆಂಕಣ್ಣ:-ಅದ್ಯಾಕೆ? ರಾಯ್ರು, ನಿಮ್ಮ ವಿಚಾರಸರಣೀನೆ ಈ ಕಾಲಕ್ಕ ಯೋಗ್ಯ. The country needs your point of view. Our paper would gladly support you. ನಾವು ನಿಮ್ಮ ಬೆನ್ನ ಹಿಂದೆ.

ಜಯರಾಯ:-(ನಿರಾಶೆಯ ನಗೆಯಿಂದ) ಈ ವಯಸ್ಸಿನೊಳಗ ಯಾಕಪ್ಪ ಈ supportಉ ಈ oppose ಉ?...ವೆಂಕಣ್ಣಾ, ಒಮ್ಮೊಮ್ಮೆ ಅನ್ನಿಸ್ತದ, ಜೀವ ಇರೋತನಕ ಹೆಣಗಾಡಬೇಕು ಅಂತ... ಆದರೆ ಹೊರಗಿನ ಪರಿಸ್ಥಿತಿ ನೋಡಿದರೆ "ಸಾಕು" ಅಂತ ಅನ್ನಿಸ್ತದ...

ವೆಂಕಣ್ಣ:-ನನಗನ್ನಿಸ್ತದ, sir, ನೀವು ತಿರುಗಿ active politics ದೊಳಗ ಸೇರಬೇಕೂ ಅಂತ (ರಾಯರು ತನ್ನನ್ನು ದಿಟ್ಟಿಸಲು) really sir, ಅಲ್ಲ honestly ಅಂತೀನಿ.

ಜಯರಾಯ:- (ತಲೆ ಅಲ್ಲಾಡಿಸುತ್ತ) ವೆಂಕಣ್ಣಾ, ಗಾಂಧಿ ಚಳವಳ ದೊಳಗ ಧುಮುಕಿದಾಗ ನಾನು ಸರಾಸರಿ ನಿನ್ನ ವಯಸ್ಸಿನವನೇ. ಆ ಮಹಾತ್ಮ ಬಂದ; ಅವನ ಧೈರ್ಯ, ಆ ಸತ್ಯ, ಅಂತಹ ಪ್ರಾಮಾಣಿಕತೆ, ಆ ವಿಶಾಲ ಹೃದಯ ನೋಡಿ ನನಗ ನಾನೇ... ಯಾಕೆ ಇಡಿಯ ಸಂಸಾರ ಕ್ಷುಲ್ಲಕ ಅನ್ನಿಸಿತು. ಜಗತ್ತಿನೊಳಗ ಸತ್ಯ, ನ್ಯಾಯ-ಅಹಿಂಸೆ ಇವುಗಳನ್ನು ನೆಲಸುವವರ ಮುಂದೆ ಮನುಷ್ಯನಿಗೆ ಇಹಪರದಲ್ಲಿ ಯಾವ ಪುರುಷಾರ್ಥವೂ ಇಲ್ಲ ಅನ್ನಿಸಿತು. ಕ್ರಮೇಣ ಕೌನ್ಸಿಲ, reforms ಅಂತ ಯಾವಾಗ ರಾಜಕಾರಣ ಸುರುವಾಯಿತೊ ಆಗ ವಿಚಾರಕ್ಕೆ ಬಿದ್ದೆ ನಾನು : ಈ ರಾಜ ಕಾರಣದ ಸಲುವಾಗಿ ವರ್ಷದೊಳಗ ಹನ್ನೊಂದು ತಿಂಗಳು ಕೈದಿ ಒಂದು ತಿಂಗಳ ಆರೋಪಿ ಆಗೋದರಿಂದ ಏನೂ ಸಾಧಿಸೋದಿಲ್ಲ ಅಂತ... ಅಂತೂ ಆ ವಿಚಾರಕ್ಕ ಅನ್ನು ಗಾಂಧಿಜಿಯವರ ಚಳವಳದೊಳಗ ದಕ್ಕೋ ಧೈರ್ಯ ಇಲ್ಲದ್ದಕ್ಕ ಅನ್ನು—ಬಿಟ್ಟೆಟ್ಟೆ. ಆದರೇನು ? ಹೃದಯದೊಳಗ ಆದ ಕ್ರಾಂತಿಗಾಗಿ ಮೊದಲಿನಂತೆ ಸಂಸಾರದೊಳಗ ಆಸಕ್ತಿ ಉಳೀಲಿಲ್ಲ. ಹೀಂಗಾಗಿ ನನ್ನಷ್ಟಕ್ಕ ನಾನೇ ಉಳಿದೆ... ಅದಕೇ ನನಗ ಆಶ್ಚರ್ಯ... ನನ್ನ ಮತ್ತೆ ಯಾಕೆ ಈ ದಿನ ಬೈಲಿಗೆಳೆದರೂ ಅಂತ.

ವೆಂಕಣ್ಣ:-(ಎದ್ದು) ಹಂ—that's it sir... ನಿಮ್ಮನ್ನ ಯಾಕ ಬೈಲಿಗೆಳೆದರು? ನಿಂ ಮುಂದಾಳುತನ ಬೇಕೂ ಅಂತ... Absolutely! The people are creating their leadership in you sir; ಸ್ವಾತಂತ್ರ್ಯದ ಸೂರ್ಯೋದಯದಲ್ಲಿ ಎಚ್ಚತ್ತ ಜನತೆಗೆ ತಮ್ಮ ಮುಂದಾಳು ಯಾರು ಅನ್ನೋದು, ಗೊತ್ತಿದೆ.

(ಹೊರಗೆ ಮೋಟರ ಕಾರುಗಳು ಬಂದ ನಿಂತ ಸದ್ದು ; ಹಾರ್ನ ಬಾರಿಸುವದು; ಒಮ್ಮೆಲೆ "ಮಹಾತ್ಮಾ ಗಾಂಧಿ ಕಿ ಜೈ" ಎಂಬ ಘೋಷ ಕೇಳಬರುವದು.)

ಜಯರಾಯ:-ಬಂದ್ರು ಕಾಣಿಸ್ತದ.

ವೆಂಕಣ್ಣ:-(ಮುಂದೆ ಬಂದು ವಿನಯದಿಂದ ಕೈಮುಗಿದು) ಈ ಸಂದರ್ಶನಕ್ಕಾಗಿ ರಣಹಲಗೆ ತಮಗೆ ಋಣಿಯಾಗಿದೆ. Thank you, sir. Personally I found it very instructive.

(ಇಷ್ಟರಲ್ಲಿ ಮನೆಯೊಳಗಿಂದ "ಚಾಳಸಿ ತಂದೆ, ರಾಯ್ರು" ಎನ್ನುತ್ತ ಗೋವಿಂದಪ್ಪ, ಅವನ ಹಿಂದಿನಿಂದ ಶಾಮು ಕೊನೆಗೆ ರಂಗಮ್ಮ ಬರುವರು. ರಂಗಮ್ಮ ಮಾತ್ರ ಬಾಗಿಲಲ್ಲಿಯೆ ತಡೆದಿರುವಳು. ಅದೇ ಕಾಲಕ್ಕೆ ಇತ್ತ ಹೊರಗಿನಿಂದ ಹನ್ಮಂತಪ್ಪನು ನಾಲ್ಕಾರು ಸ್ವಯಂಸೇವಕರೊಡನೆ ಬರುವನು. ಬಂದವನೆ ಬಾಗಿ ರಾಯರ ಪಾದ ಮುಟ್ಟಿ ನಮಸ್ಕರಿಸಲು ಹೋಗುವನು. ಜಯರಾಯರು "ಎಲ, ಇದೇನ್ಮಾಡ್ತಿಯೋ?" ಎನ್ನುತ್ತ ಅವನನ್ನು ಹಿಡಿದೆತ್ತುವರು. ಶಾಮನು ವೆಂಕಣ್ಣನನ್ನು ಒಂದು ಬದಿಗೆ ಎಳೆದುಕೊಂಡು ಬಂದು—)

ಶಾಮು:-(ಮೆಲುದನಿಯಲ್ಲಿ) ಸಿಕ್ಕಿತೇನೊ, ಸಂದರ್ಶನ?

ವೆಂಕಣ್ಣ:-(ಕಳ್ಳದನಿಯಲ್ಲಿ) ಸಿಕ್ಕಿತು, ಆದರೆ ಯಾರಿಗೂ ಹೇಳೊ ಹಾಗಿಲ್ಲ.

ಶಾಮು:-ಪೇಪರದೊಳಗ ಬರೋತನಕ ಗುಪ್ತ ಏನು?

ವೆಂಕಣ್ಣ:-(ಕಳ್ಳದನಿಯಲ್ಲಿಯೆ) ಅದನ್ನ ಪೇಪರದೊಳಗ ನೋಡಿದೆಯಂದ್ರ ನಾನು ಸತ್ತೀನಿ ಅಂತ ತಿಳಿದುಕೊ.

ಜಯರಾಯ:-(ಹನ್ಮಂತಪ್ಪನಿಗೆ) ಏಳೋ, ಏಳು. ಇದನ್ನೇನ ಮಾಡ್ತಿ?

ಹನ್ಮಂತಪ್ಪ:-(ಸುತ್ತಲೂ ನೋಡಿ ವೆಂಕಣ್ಣನಿಗೆ) ರಾಯ್ರು ನಮ್ಮನ್ನ ಹಾದಿಗೆ ಹಚ್ಚಿದರಂತೇ ನಾವು ದೇಶಸೇವಾಕ್ಕ ಬಿದ್ದದ್ದು. ಬೇಕಾದರೆ ಇದನ್ನ ನಾ ಹೇಳಿದೆ ಅಂತ ಬರಕೊ, ವೆಂಕಣ್ಣ. ಇವತ್ತ ಸ್ವಾತಂತ್ರ್ಯ ದೊರಕಿದ್ದಕ್ಕ ನಮ್ಮದೇನಾದ್ರೂ ಸೇವಾ ಮುಟ್ಟಿದ್ರ ಅದು ನಮ್ಮ ರಾಯ್ರು ಕೃಪಾದಿಂದೇ.

ವೆಂಕಣ್ಣ:- Hear ! Hear !

ಹನ್ಮಂತಪ್ಪ:-(ಉಬ್ಬಿ) ಗೋವಿಂದಪ್ಪ, ಆ...ಆ ಇದನ್ನ ತಗೋ (ಎಂದು ಸನ್ನೆಯಿಂದ ಮಾಲೆಯನ್ನು ಸೂಚಿಸುವನು.)

[ಗೋವಿಂದಪ್ಪನು ಅತ್ಯಂತ ಆದರ ಬುದ್ಧಿಯಿಂದ ತಂದುಕೊಟ್ಟ ಈ ಮಾಲೆಯನ್ನು ಹನ್ಮಂತಪ್ಪನು ರಾಯರಿಗೆ ಹಾಕುವಾಗ—]

ಜಯರಾಯ:-(ಹಿಂದೆ ಸರಿದು) ಛೀ, ಛೀ, ಎಂತಹ ಹುಚ್ಚುತನ ! ನನಗ ಯಾಕ ಈ ಮಾಲೆ ?

ಹನ್ಮಂತಪ್ಪ:-(ನಿರಾಶೆಯಿಂದ) ನಮ್ಮ ಕಮಿಟಿ ಜನ ಒಮ್ಮತದಿಂದ ಠರಾವು ಮಾಡಿ—

ಜಯರಾಯ:-(ನಡುವೆಯೆ) ಮಾಲೆಗೆ ಠರಾವು ಯಾಕ? ಆದ್ರೂ ನನಗ ಬ್ಯಾಡ.

[ಎಂದು ನಡೆಯಲು ನಿರಾಶಿತನಾಗಿ, ನಿರುಪಾಯವಾಗಿ ಎಲ್ಲರೂ ನಿಂತಲ್ಲಿಯೇ ನಿಂತುದನ್ನು ನೋಡಿ ರಾಯರೂ ತಡೆಯುವರು. ಮಾಲೆಗೆ ಅವರ ಮನಸ್ಸಿಲ್ಲ. ಹಾಕದೆ ಹನ್ಮಂತಪ್ಪಗೆ ಸಮಾಧಾನವಿಲ್ಲ ಈ ಬಿಕ್ಕಟ್ಟಿನ ವಾತಾವರಣದಲ್ಲಿ ಎಲ್ಲರೂ ನಿಷ್ಕ್ರಿಯರಾದಾಗ]

ರಂಗಮ್ಮ:-(ನಿಂತಲ್ಲಿಯೇ) ಅಯ್ಯ ! ಉಬ್ಬಿನಿಂದ ತಂದಾರ ಹಾಕಿಕೊಬಾರದ ? (ಗಂಡನು ತನ್ನನ್ನು ನೋಡಲು) ಬ್ಯಾಡಾದ್ರ ಮೋಟಾರದಾಗ ತಗದಿಟ್ಟರಾಯಿತು...

ಹನ್ಮಂತಪ್ಪ—(ಜೀವ ಬಂದಂತಾಗಿ) ಹೌದು, ರಂಗಮ್ಮನವರೆ, ರಾಯರಿಗೆ ನಮ್ಮ ಕಾಣಿಕೆ ಅಂತ ನಾವು ತಂದದ್ದು. ನಮ್ಮ ಈ ಸತ್ಕಾರ ಅವರು ಸ್ವೀಕರಿಸಿದರ ನಮಗ ಆನಂದ.

ವೆಂಕಣ್ಣ:-ರಾಯ್ರು ಮಾಲೀ ಹಾಕಿಸಿಗೊಳ್ಳಬೇಕೂ ಅಂತ ನಮ್ಮ ಸೂಚನೆ. It is our token of respect.

ಹನ್ಮಂತಪ್ಪ:-ಅಕ ! ನಮ್ಮ ಎಂಕಣ್ಣಾ ಇಂಗ್ಲಿಶದಾಗ ಹೇಳಿದಾ ಅಂದ್ರ ಮನಸಿನಾಗ ಇದ್ದದ್ದನ್ನೆ ಹೇಳಿದಾ ಅಂತ, ಆಯ್ತು.

ಜಯರಾಯ:-(ನಕ್ಕು) ಅಲ್ಲೊ, ಹನ್ಮಂತಾ ನನಗ ಯಾಕ ಈ ಸನ್ಮಾನ ಅಂತ.?

ಹನ್ಮಂತಪ್ಪ:-ಯಾಕಂದರ ? ನಮಗ ನೀವೇ ಹಿರೇರು, ಅಂತ. (ರಂಗಮ್ಮನಿಗೆ) ಹೌದು ಶೀರೋ ಇಲ್ಲೇ ರಂಗಮ್ಮನವರೆ...?

ವೆಂಕಣ್ಣ:-You are perfectly..(ಹನ್ಮಂತಪ್ಪನು ದಿಟ್ಟಿಸಲು) ನೀವು ಹೇಳಿದ್ದು ಯೋಗ್ಯ.

ಜಯರಾಯ:-ನನಗೇನೊ ಇದು ಯೋಗ್ಯ ಅಲ್ಲ ಅಂತ ಕಾಣಸ್ತ ದ.

ಗೋವಿಂದಪ್ಪ:-(ನಮ್ರತೆಯಿಂದ) ನಮ್ಮ ಸಮಾಧಾನಕ್ಕಾದರೂ—

ರಂಗಮ್ಮ:-(ನಡುವೆಯೆ) ಅಯ್ಯ ! ಬಂದವರಿಗೆ ಯಾಕ ಹೊತ್ತ ಮಾಡತೀರಿ ಸುಮ್ಮನೆ ?

ಜಯರಾಯ:-ಗೋವಿಂದಪ್ಪ, ಇಲ್ಲಿ ಬಾ...ಹಾಕಿದ ಕೂಡಲೆ ಅದನ್ನಿಷ್ಟು ತೆಗೆದಿಟ್ಟುಬಿಡು.

ಹನ್ಮಂತಪ್ಪ:-(ಮಾಲೆಯನ್ನು ಎತ್ತಿಹಿಡಿದು) ಈ ಹೊತ್ತು ನಮ್ಮ ದೇಶಕ್ಕ ಸ್ವಾತಂತ್ರ್ಯ ಶಿಕ್ಕಿತು. (ಹಾಗೇ ನಿಂತ ವೆಂಕಣ್ಣನಿಗೆ ಸನ್ನೆಮಾಡಿ ಮತ್ತೆ ಪ್ರಾರಂಭಿಸುವನು. ವೆಂಕಣ್ಣನು ಬರೆದುಕೊಂಡಂತೆ ಮಾಡುವನು.) ಈ ಹೊತ್ತು ನಮ್ಮ ದೇಶಕ್ಕ ಸ್ವಾತಂತ್ರ್ಯಸಿಕ್ಕಿತು. ಈ ಸ್ವಾತಂತ್ರ್ಯವನ್ನು ನಮ್ಮ ಮಹಾತ್ಮಾಜಿಯುವರು ತಂದುಕೊಟ್ಟರು, ಅಂತ ಇಡೀ ಜಗತ್ತಿಗೆ ನಾ ಸಾರಿ ಹೇಳ್ತೀನಿ. ಮಹಾತ್ಮಾಗಾಂಧಿಯವರು, ನಮ್ಮ ಪರಮಪೂಜ್ಯ ಬಾಪೂಜಿಯವರು, ಇವರು ತಂದುಕೊಟ್ಟರು. ನಾವೆಲ್ಲಾ ಅವರ ಸೈನಿಕರಾಗಿ ಹೋರಾಡಿದೀವಿ, ಸತ್ಯ ಅಹಿಂಸಾದಿಂದ ಹೋರಾಡಿದೀವಿ... ಇಂದಿನ ಈ ಶುಭಪ್ರಸಂಗದಾಗ-ನನ್ನವತಿಯಿಂದ, ನನ್ನ ಕಮಿಟಿವತಿಯಿಂದ, ನಮ್ಮ ಊರವರ ವತಿಯಿಂದ ನಮ್ಮೆಲ್ಲರಿಗೆ ಹಿರೇರೂ ಗುರುಗಳೂ ಆದ ಜಯರಾಯರಿಗೆ ನಮ್ಮ ಸೇವಾದ ಕಾಣಿಕೆ ಅಂತ ಈ ಮಾಲೆ ಅರ್ಪಿಸ್ತೀನಿ. (ರಾಯರು ತಲೆಬಾಗಿಸಿ ನಿಲ್ಲುವರು. ಆ ಕಡೆ ಲಕ್ಷ್ಯವಿಲ್ಲದೆ) ಜಯರಾಯ್ರಂದ್ರ, ನಮ್ಮೆಲ್ಲರಿಗೂ ಹಿರಿಯರು, ಕಾಂಗ್ರೆಸ ಚಳವಳದಾಗ ನಂ ಗುರುಗಳು, ದೇಶಕ್ಕಾಗಿ ಸ್ವಾರ್ಥತ್ಯಾಗ ಮಾಡಿದವರು—ಅಂಥೇಳಿ ನಾನು ಸಂತೋಷದಿಂದ ಈ ಮಾಲೆಯನ್ನು ಅವರಿಗೆ ಅರ್ಪಿಸುತ್ತೇನೆ. (ಎಂದು..ಈ ಕಡೆ ಕೈಗಳಿಂದ ಹಾಕುತ್ತ ಮುಖ ತಿರುಗಿಸಿ ಸ್ವಯಂಸೇವಕರಿಗೆ ಸನ್ನೆಮಾಡುವನು. ಅವರು ಚಪ್ಪಾಳೆಯನ್ನು ತಟ್ಟುವರು. ತರುವಾಯ ವೆಂಕಣ್ಣನೂ ಚಪ್ಪಾಳೆಯನ್ನು ತಟ್ಟುವನು. ಗೋವಿಂದಪ್ಪನು ಅತ್ಯಂತ ಆವೇಶದಿಂದ ಚಪ್ಪಾಳೆಯನ್ನು ತಟ

ಬೇಕೆನ್ನುವಾಗ ರಾಯರು ಈ ಮಾಲೆಯನ್ನು ಅವನ ಕೈಗೆ ಬಿಟ್ಟು)

ಜಯರಾಯ:-ಆಯಿತಿಲ್ಲೊ ! ಹೊರಡೋಣ ಇನ್ನು !

ಹನ್ಮಂತಪ್ಪ:-(ಸ್ವಯಂಸೇವಕರಿಗೆ) ಗಾಡಿ ಗಡಾನೆ ತಿರುಗಿಸಿ ಬಾಗಿಲಿಗೆ ತೊಗೊಂಡು ಬಾ ಅಂತ ಹೇಳಿರಿ ಶಾಪೂರಕರರಿಗೆ. (ಅವರು ಹೋಗುವರು) ಶಾಮಣ್ಣಾ, ಬರ್ತೀಯಲ್ಲ...ಇನ್ನೂ ಎರಡು ಗಾಡೀ ತಂದೀನಿ. ನಡೀರಿ ರಂಗವ್ವನೋರೆ, ನೀವೂ ಬರ್ಬೇಕು.

ಜಯರಾಯ:-(ಹೆಂಡತಿಗೆ) ಬರ್ತೀವಿನೂ ? ನಡಿ.

ರಂಗವ್ವ:-(ಕೆಣಕುವ ದನಿಯಿಂದ) ಭಲೋ ಹೇಳ್ತೀರಿ! ನೀವು ಮಾಲಿ ಹಾಕಿಕೊಂಡು ಕೂಡ್ರಿ, ನಿಮ್ಮ ಮಗ್ಗುಲಾಗ ನಾನು; ಮೋಟರದ ಮೆರವಣಿಗೀನೇ ಆದೀತು ?

ಶಾಮ:-ಹೋಗಲ, ಅವ್ವಾ. ಇಷ್ಟು ಕರೀತಾರಂದ್ರ ಏನೂ?

ರಂಗವ್ವ:-(ಸಿಟ್ಟನಿಂದ) ಸಾಕು, ಸುಮ್ಮನಿರೊ ! (ಹನ್ಮಂತಪ್ಪನಿಗೆ) ಸಂಜೆಯ ಸಭಾಕ್ಕ ಬರ್ತೀನಿ ಹನ್ಮಂತಪ್ಪಾ!

ಹನ್ಮಂತಪ್ಪ:-ಹಾಂಗೇ ಮಾಡಿರಿ. ಸಂಜೆಗೆ ಮೋಟರ ಕಳಿಸಿ ಕೊಡ್ತೀನಿ ಹಾಂಗಾದ್ರ.

ಜಯರಾಯ:-ಹುಂ... ನಡೀ... ಹನ್ಮಂತಾ.

ಶಾಮ:-(ಹನ್ಮಂತಪ್ಪನು ತನ್ನನ್ನು ನೋಡಲು) ಬಂದೆ, ನಡೀ. ನಾನು ವೆಂಕಣ್ಣ ಕೂಡಿಯೆ ಬರ್ತೀವಿ.

ಗೋವಿಂದಪ್ಪ:-ಈ ಮಾಲೆ ಅಲ್ಲಿಗೆ ತರ್ಬೇಕೇನು ?

ಜಯರಾಯ:-ಛೀ, ಹುಚ್ಚಪ್ಪಾ. ಅದ್ನ ಇಟ್ಟುಬಿಡು.

ಹನ್ಮಂತಪ್ಪ:-ಇಲ್ಲೇ ಇಟ್ಟಿಬಿಡು, ಗೋವಿಂದಪ್ಪ... ಹಂ... ನೀನೂ ಬರ್ತೀ ಏನು ? ಬರ್ತಿದ್ರ ಬಾ. ಗಾಡ್ಯಾಗ ಜಾಗಾ ಅದ.

[ರಾಯರೂ ಹನ್ಮಂತಪ್ಪನೂ ಹೋಗುವರು. ಗೋವಿಂದಪ್ಪನು ಮಾಲೆಯನ್ನು ಬಾಕಿನ ಮೇಲಿ ಇಟ್ಟು ಅವಸರವಸರವಾಗಿ ಧಾವಿಸುವನು... ಒಂದೆರಡು ನಿಮಿಷಗಳ ತರುವಾಯ ಹೊರಗೆ ಮೋಟರ ಹೊರಟ ಮತ್ತು ಹಾರ್ನ ಬಾರಿಸಿದ ಸದ್ದು ಕೇಳ ಬರುವದು. ಆ ಸದ್ದು ಅಡಗುವವರೆಗೆ ಒಳಗೆ ಮೂವರೂ ಮಾತನಾಡದೆ ಇರುವರು. ಆಮೇಲೆ ರಂಗವ್ವನು ರಂಗಭೂಮಿಯನ್ನು ದಾಟ ಹೊರಗೆ

ಹೋಗಿ—ನೋಡಿ ಬಂದವಳಂತೆ ಮತ್ತೆ ನಡೆದು ರಂಗದ (ಪ್ರೇಕ್ಷಕರ) ಎಡಬದಿಗೆ ನಿಂತು—]

ರಂಗಮ್ಮ:-(ತನ್ನಷ್ಟಕ್ಕೆ) ಎಲ್ಲಾ ಒಂದು ನಾಟಕ ಇದ್ಧಾಂಗ ಅದ.

ವೆಂಕಣ್ಣ:-ನೀವೂ ಹೋಗ್ಬೇಕಾಗಿತ್ತು, ರಂಗಮ್ಮನೋರೆ.

ರಂಗಮ್ಮ:-ನನ್ದೂ ಎಲ್ಲಾ ವೈಭವ ಮುಗಿದದೆ, ವೆಂಕಣ್ಣಾ. ಸಭಾ ಆಗೇದ, ಮಾಲೆ ಹಾಕಿಸಿಕೊಳೋದು ಆಗೇದ, ಜೇಲ ಆಯ್ತು, ಜೈಜೈಕಾರ ಆಯ್ತು: ಈಗೇನೂ ಮೋಜು ಉಳಿದಿಲ್ಲ ಅದರೊಳಗ.

ವೆಂಕಣ್ಣ:-(ಶಾಮುನಿಗೆ) ನೀನು ಯಾಕ ಹೋಗಲಿಲ್ಲೊ, ಹನ್ಮಂತಪ್ಪ ಇಷ್ಟು ಬೆನ್ನ ಹತ್ತಿದ್ದ ನಿನಗ ?

ಶಾಮು:-ಆಗಿ ಹೋಯ್ತು! ಮಂದೀನ್ನ ಹಿಡಿಯೋದಕಂತೇ ಸಂಬಳ ಕೊಟ್ಟ ಇಟ್ಟ ಪೋಲೀಸಿನವರ ಕೈಯಾಗ ಸಿಗಲಿಲ್ಲ ಅಂತ ನಾನು... ಇನ್ನ ಈ ಹನ್ಮಂತಪ್ಪನ ಕೈಯಾಗ ಸಿಗ್ತೀನೇ ? (ಎಂದು ನಡೆದು ತೆಕ್ಕೆಗೆ ಹಾಯಾಗಿ ಆತುಕೊಂಡು ಕಾಲು ಚಾಚಿ ಕೂಡ್ರುವನು.)

ರಂಗಮ್ಮ:-(ವೆಂಕಣ್ಣನಿಗೆ) ನಿನಗ ಸಭಾಗಿಬಾ ಆದಲ್ಲಿ ಹೋಗಬೇಕಾಗೂದಿಲ್ಲೇನೊ, ವೆಂಕಣ್ಣಾ, ಬರೆದುಕೊಳ್ಳಲಿಕ್ಕೆ ?

ವೆಂಕಣ್ಣ:-(ನಗೆಯಿಂದ) ನನ್ದು ಬರಕೊಳ್ಳೋದು ಇಲ್ಲೇ ಮುಗೀತು, ರಂಗಮ್ಮನೋರೆ. [ಇವರಿಬ್ಬರ ಮಾತು ನಡೆದಾಗ ಶಾಮುನು ಯಾವುದೋ ಒಂದು ವಿಚಾರದಲ್ಲಿ ತೊಡಗಿ ಲಕ್ಷ್ಯವಿಲ್ಲದೆ ಕೂತಿರುವನು.]

ರಂಗಮ್ಮ:-ನಿಮ್ಮಂದ ಇಷ್ಟರಾಗೇ ಆಯ್ತೇನು ಇವರ ಲೆಕ್ಚರು ?

ವೆಂಕಣ್ಣ:-(ಗೋವಿಂದಪ್ಪನು ಅವಸರದಲ್ಲಿಟ್ಟ ಮಾಲೆಯನ್ನು ಬಾಕಿನ ಮೇಲೆ ಒಂದು ದಂಡೆಗೆ ಸರಿಯಾಗಿ ಇಡುತ್ತ) ಹುಂ...ಅಂದ್ರ ಲೆಕ್ಚರ ಏನೂ ಅಲ್ಲ ಅದು. ರಾಯ್ರು ಅಗದೀ ಮನಸ್ಸ ಬಿಚ್ಚಿ ಮಾತಾಡಿದ್ರು !

ರಂಗಮ್ಮ:-ಅದಕೇ ಅವರು ಸಭಾಕ್ಕ ಹೋಗಲಿ ಅಂತ ನಾನೂ ಹಟ ಹಿಡಿದೆ. ಅವರೇನೊ ಮೊದಲು "ಒಲ್ಲೆ" ಅಂತ ಹೇಳಿದ್ದರು. ಏನಾದ್ರೂ ಗಂಡಸಿನ ಸ್ವಭಾವನೋಡು, ವೆಂಕಣ್ಣಾ, ಎಷ್ಟುದಿವಸ ಮನೀ ಹಿಡಕೊಂಡು ಸುಮ್ಮಗ ಕೂತೀತು ? "ಊರಿಗೆ ಏನಾದ್ರು ಒಂದು ಛಲೋ ಕೆಲಸ ಮಾಡ್ಬೇಕು, ನೋಡು" ಅಂತ ನನಗ ಹೇಳ್ತಿದ್ರು. "ಊರೊಳಗ ಒಬ್ಬ

ಪ್ರಾಮಾಣಿಕ ಮನುಷ್ಯ ಮುಂದಾದ್ರ ಸಾಕು'' ಅಂತಿದ್ರು ಮ್ಯಾಲಿಂದ ಮ್ಯಾಲೆ. ನನಗೋ ಗೊತ್ತಿತ್ತು. ಇವರಿಗೆ ಸುಮ್ಮ ಕೂತು ಸಾಕಾಗೇದ ಅಂತ. ''ನಮೂರು ಸ್ವಚ್ಛ ಆಗ್ಬೇಕು, ರಸ್ತೆ ದೊಡ್ಡವು ಆಗ್ಬೇಕು, ಹುಡುಗರ ಸಾಲೆ ಪ್ರಶಸ್ತ ಇರಬೇಕು. ಮನಸ್ಮಾಡಿದ್ರ ಇದೇನು ದೊಡ್ಡ ಕೆಲಸ ಅಲ್ಲಾ,'' ಅಂತ ಇವರ ವಿಚಾರ. ಆಮ್ಯಾಲೆ ಬಂತು ಈ ಇಂಗ್ರೇಜರು ನಮ್ಮ ದೇಶ ಬಿಟ್ಟು ಹೋಗೂದು ಅಂತ. ಆವೊತ್ತಂತು ಹುಡಗರ್ಹಾಂಗ ಕುಣದಾಡಿದ್ರು. ''ಇಂಥಾ ಕಾಲ ನನ್ನ ಜೀವಮಾನದಾಗ ಬರ್ತದ ಅಂತ ತಿಳಿದಿದ್ದಿಲ್ಲ'' ಅಂದರು. ಇನ್ನು ಅದನ್ನ ಮಾಡ್ಬೇಕು, ಅಂತ ಒಂದೇ ಸವನೆ ಚಡಪಡಿಸತಿದ್ದರು. ಕಡೆಗೆ ನಾನೇ ಹೇಳಿದೆ, ''ಮಾಡೋದಾದ್ರ ನಿಮು ಗ್ಯಾರ ಬ್ಯಾಡ ಅಂತಾರ. ನಿಮ್ಮ ಮಂದಿ ಅದ, ಊರಾಗ ನಿಮುಗ ಮಾನ ಮರ್ಯಾದೆ ಅದ. ಮುಂದಾಗ್ರಿ...ಮಾಡಿರಿ'' ಅಂತ, ನನಗೇ ಬೈದರು. ''ಹುಚ್ಚಿ ಇದ್ದಿ ನೀನೂ, ಈಗ ನಮ್ಮ ಮಾತು ಯಾರ ಕೇಳ್ತಾರ?'' ಅಂತ. ಆಮ್ಯಾಲೆ ಹನ್ಮಂತಪ್ಪ ಬಂದ. ''ಈಗಾದ್ರು ಹೋಗ್ರೆಲ್ಲ?'' ಅಂದೆ ಯಾಕೊ, ವೆಂಕಣ್ಣಾ ? ತನಗ ಮಾಡ್ಬೇಕು ಅಂತ ಹಟ ಇದ್ರ ಮುಂದಾಗ ಬೇಕು, ಭರಾಭರಾ ಮಾಡ್ಬೇಕು. ಹೌದಂತೀಯೊ ಇಲ್ಲೊ, ವೆಂಕಣ್ಣಾ ?

ವೆಂಕಣ್ಣ:-ನೀವು ಹೇಳೋದು ಯೋಗ್ಯ. That's the Correct attitude ಯಾಕೊ, ಶಾಮೂ ?

ಶಾಮು:-(ಒಮ್ಮೆಲೆ ಎಚ್ಚೆತ್ತವನಂತೆ) ಅಂ ?

ರಂಗಮ್ಮ:-ಅಯ್ಯ ! ಕೂಡೊ, ವೆಂಕಣ್ಣಾ, ನಾನೇ ಮಾತಾಡಿ ಕೋತ ನಿಂತೆ. ನೀ ಸಭಾಕ್ಕ ಹೋಗ್ತಿದ್ದಿಲ್ಲಾ ಅಂದ್ರ ಚಹಾ ಆದ್ರೂ ಮಾಡಿ ತರ್ತೀನಿ. (ಒಳಗೆ ಹೊರಡುವಳು.)

ವೆಂಕಣ್ಣ:-(ಬಾಕಿನ ಮೇಲೆ ಕೂಡ್ರುತ್ತ) ಛೇ! ಬ್ಯಾಡ ಬಿಡ್ರೀ ರಂಗಮ್ಮ.

ಶಾಮು:-(ಗಟ್ಟಿಯಾಗಿ ನಕ್ಕು) ಬ್ಯಾಡ ಬಿಡ್ರೀ ಅಂತನಿಂತವ ಧರಣೀ ಕೂತಿಯಲ್ಲೋ ?

ರಂಗಮ್ಮ:-ಇರಲಿ, ಬಿಡೊ! ಕೂಡು ಅಂದೆ, ಕೂತ, ಹಿರೇರ ಮಾತು ಕೇಳ್ತಾನ ಅವ. (ಎನ್ನುತ್ತ ಒಳಗೆ ಹೋಗುವಳು.)

ಶಾಮು:- ಈ ಸರ್ಟಿಫಿಕೇಟನ್ನೂ ಛಾಪಿಸುವನ ಏನು, interview ಅಂತ ?

ವೆಂಕಣ್ಣ:-(ಉದ್ದ ಉಸಿರೆಳೆದು) ಹಂ...ಅಂತೂ ಇವೊತ್ತಿನ ಸಭಾದ ಲಕ್ಷಣ ಏನೂ ನೆಟ್ಟಗ ಕಾಣದಿಲ್ಲ.

ಶಾಮು:- (ಸಂಶಯು ಸಿಟ್ಟುಗಳಿಂದ) ಯಾಕೋ ?

ವೆಂಕಣ್ಣ:-ರಾಯರ ಮನಸಿನ್ಯಾಗ ಏನದ ತಿಳೀತು ನನಗ. ಆದರೆ ಇಂಥಾದ್ದನ್ನೆಲ್ಲಾ ಅವರು ಸಭಾದಾಗ ಹೇಳಿದರೆ ಜನ ಕೇಳಲಿಕ್ಕಿಲ್ಲಾ ಅಂತ ಅನ್ನಿಸ್ತದ.

ಶಾಮು:-ಹುಚ್ಚ ಇದ್ದೀ ನೀನು ! ಕೇಳ್ತಾರ, ಕೇಳಿ ಚಪ್ಪಾಳೆ ಹೊಡೀತಾರ!

ವೆಂಕಣ್ಣ:-(ತಲೆ ಅಲ್ಲಾಡಿಸುತ್ತ) you dont see it, ಶಾಮು... ಕೆಲಸ ಮಾಡೋದು ಮುಗೀತು ಅನ್ನೋ ಖುಷಿಯೊಳಗ ಅದ ಜನ. ಅವರಿಗೆ ಮಾಡೋ ಕೆಲಸ ಇನ್ನ ಮುಂದೇ ಅದ ಅಂದ್ರ— no, I am really sorry for Jaya Rao.

ಶಾಮು:-(ನಕ್ಕು)ಆಗಿ ಹೋಯ್ತು, ನೀನೂ ನಿನ್ನ sorry ! ನಮ್ಮ ತಂದೆಯವರು ಏನ ಹೇಳ್ತಾರಂತ ನಾಡೀದಿ, ವೆಂಕಣ್ಣಾ? ಅವರ ಕಾಲದೊಳಗ ಗಾಂಧಿಯವರು ಏನ ಹೇಳ್ತಿದ್ದರೊ ಅದನ್ನೇ ಹೇಳುವವರು. ಆಗೂ ಕೇಳಿದ ಜನ ಅದರಂತೆ ನಡೀಲಿಲ್ಲ, ಈಗ ನಡೀಬೇಕಾಗಿಲ್ಲ. "ಕರ್ನಾಟಕದ ಸಿಂಹ ಮತ್ತೆ ಗರ್ಜಿಸಿತು" ಅಂತ ನಾಳೆ ನೀವು ಪೇಪರದೊಳಗ ಕೊಡ್ತಿರಿ.

ವೆಂಕಣ್ಣ:-ಸಿಂಹ ಗರ್ಜಿಸಬಹುದೊ ಶಾಮು! ಅದರ ಹೆದರಿಕಿ ನನಗಿಲ್ಲ. ಜಯರಾಯರು ಅಂತಃಕರಣ ಪೂರ್ವಕ ಹೇಳ್ತಾರ ಅನ್ನೊ ಸಂಶಯನೂ ನನಗಿಲ್ಲ. ಆದರೆ ಅದs ನನಗೆ ಹೆದರಿಕೆ.

ಶಾಮು:-(ಬೆರಗಾದ ದನಿಯಲ್ಲಿ) ಏನಂದೆ ?

ವೆಂಕಣ್ಣ:-I am sorry for his sincerity.

ಶಾಮು:-(ನಕ್ಕು) ಹೋಗೊ ನಿನ! ಇದ್ಮಾತಂದ್ರ ನೀನು ಪುಕ್ಕ ಇದ್ದೀ, ವೆಂಕಣ್ಣಾ....ಏನು ನಿರಾಶಾವಾದಿ ಇದ್ದೀಯೊ?

ವೆಂಕಣ್ಣ:-ಇಲ್ಲೊ, ಶಾಮಾ. (ಅತ್ತಿತ್ತ ನೋಡಿ ಕಳ್ಳದನಿಯಲ್ಲಿ) ಹನ್ಮಂತಪ್ಪ ರಾಯರ ಕಡೆ ಯಾಕ ಬಂದ ನಿನಗ್ಗೊತ್ತದ ಏನು? I know it.

ಶಾಮು:-ಯಾಕ ಏನು? "ಹಿರೇರಿಗೆ ಮಾನ ಕೊಡ್ತಾನ ಹನ್ಮಂತಪ್ಪ, ಬಹಳ ಒಳ್ಳೇ ಮನುಷ್ಯ" ಅಂತ ಅನ್ನಿಸಿಕೊಳ್ಳಲಿಕ್ಕೆ.

ವೆಂಕಣ್ಣ:-(ತಲೆ ಅಲ್ಲಾಡಿಸುತ್ತ) ಉಹುಂ.

ಶಾಮು:-(ಕೆರಳಿದ ಕುತೂಹಲದಿಂದ) ಅಂದ್ರೆ?

ವೆಂಕಣ್ಣ:-(ಅತ್ತಿತ್ತ ನೋಡಿ, ಎದ್ದು ಶಾಮುನ ಹತ್ತಿರ, ಪ್ರೇಕ್ಷಕರಿಗೆ ಇದಿರಾಗಿ ಕುಳಿತು) ಅದೊಂದು ದೊಡ್ಡ ಕತೀನೇ ಅದು.

ಶಾಮು:-(ಕುತೂಹಲ ತಡೆಯದೆ) ಏನು? ಅಂತೀಯಾದ್ರೂ ಏನು ನೀನು?

ವೆಂಕಣ್ಣ:-(ಇನ್ನಿಷ್ಟು ಹತ್ತಿರ ಸರಿದು) ಈ ಹೊತ್ತಿನ ಧ್ವಜವಂದನ ತನ್ನ ಕೈಯಿಂದಲೆ ಆಗಬೇಕೂ ಅಂತ ಹನ್ಮಂತಪ್ಪ ಹಟ ಹಿಡಿದ. ಆದರೆ ಅವನಿಗಾಗದವರು ಇನ್ನೊಂದು ಹೆಸರು ಸೂಚಿಸಿದರು. ವಾದ ಬೆಳೀತು. ಕಡೀಕೆ ಹನ್ಮಂತಪ್ಪ ಮೆಜಾರಿಟಿ ತನ್ನ ಕಡೆ ಇಲ್ಲ ಅಂತ ಕಂಡು ತಲಿಕೆದರಿ, ಹುಡುಕಿ, ಜಯರಾಯರ ಹೆಸರನ್ನ ಮುಂದಮಾಡಿದ. ಎಲ್ಲಾರಿಗೂ ಸುಮ್ಮನಿರಬೇಕಾಯ್ತು. ಅದಕೇ ಅಲ್ಲೀನು ಹನ್ಮಂತಪ್ಪ ಒಬ್ಬನೇ ಮೋಟರ ತೊಗೊಂಡು ಒಡಾಡ್ತಾನ ಜಯರಾಯರ ಕಡೆ? ಇದು ಖರೆ ಗುಟ್ಟು! That's the inner story my boy!

ಶಾಮು:-(ಒಂದು ನಿಮಿಷ ದಂಗು ಬಡೆದವನಂತೆ ಸುಮ್ಮನಿದ್ದು, ಉಸಿರೆಳೆದು) ಅಂತೂ ರಾಯರ ಲೀಡರಶಿಪ್‌ಉ ಧ್ವಜವಂದನೆಯ ಪೂರ್ತಿ ಅನ್ನು.

ವೆಂಕಣ್ಣ:-Keep it to yourself. ರಾಯರ ತನಕ ಈ ಸುದ್ದಿ ಹೋಗಗೊಡಬೇಡ...ಅಂ?

ರಂಗಮ್ಮ:- (ಇಬ್ಬರಿಗಾಗಿ ಚಹ ತೆಗೆದುಕೊಂಡು ಬಾಗಿಲವರೆಗೆ ಬಂದು) ಾಮಾ, ಹಿಡಿಯೊ.

(ಶಾಮನು ಎದ್ದುಹೋಗಿ ತಾಯಿಯಿಂದ ಎರಡೂ ಕಪ್‌ಉಗಳನ್ನು ಗೆದುಕೊಂಡು ಸಾವಕಾಶವಾಗಿ ನಡೆಯುತ್ತ ಬಂದು ಅವನ್ನು ಕೆಳಗಿಡುತ್ತ)

ಶಾಮು:-ನನಗ ಮೊದಲೇ ಗೊತ್ತಿದ್ರ ಬ್ಯಾಡಾ ಅಂತ....ಹೇಳ್ತಿದ್ದೆ.

ರಂಗಮ್ಮ:-(ನಿಂತಲ್ಲಿಯೆ) ಏನೊ ಅದು, ಶಾಮಾ?

(ರಂಗಮ್ಮನಿಗೆ ಕೇಳಿಸಿದ್ದಕ್ಕೆ ವೆಂಕಣ್ಣ ಗಾಬರಿಯಾಗಿ ನಾಲಗೆ ಕಚ್ಚಿಕೊಳ್ಳು ನು. ಶಾಮನೂ ಒಂದರೆ ನಿಮಿಷ ಬೆಚ್ಚಿಬಿದ್ದು—)

ಶಾಮು:-ಏನಿಲ್ಲ-ಏ-ಏನಿಲ್ಲ, ಅವ್ವ. ವೆಂಕಣ್ಣನ ಚಾಷ್ಟಿ. ನಾವು ೂರೂ ಮಂದಿ ಸಭಾಕ್ಕ ಬರ್ಬೇಕು ಅಂತ ನೂರೂ ಮಂದಿಗೆ ಒಂದೊಂದು ೋಟರ ತಂದಿದ್ನಂತ ಹನ್ಮಂತಪ್ಪ. ಅದು ನನಗ ಮೊದಲೇ ಗೊತ್ತಿದ್ರ ಾ "ಬ್ಯಾಡ, ತರಬ್ಯಾಡ" ಅಂತ ಹೇಳ್ತಿದ್ದೆ, ಅಂದೆ.

ರಂಗಮ್ಮ:–ಪಾಪ! ಅವನ್ದೇನು ಚಾಷ್ಟಿ ಮಾಡ್ತೀರಿ? ನೋಡು, ೆಂಕಣ್ಣಾ! ಎಂದ್ನಿಂದ ಆ ಹನ್ಮಂತಪ್ಪ ನಮ್ಮ ಇವರ್ನ ಕೇಳ್ದೆ ಒಂದು ಕೆಲಸ ಾಡೋದಿಲ್ಲ. ಇವರ ಸಲುವಾಗಿ ಬಹಾಳ ಭಕ್ತಿ ಅವನಿಗೆ! ಇತ್ತಿತ್ತಲಾಗಿ ಇವರಿಗೇ ಎಲ್ಲಾ ಬ್ಯಾಡಾಯ್ತು, ಅಂತ ಅವನು ಕೇಳೂದನ್ನ ಬಿಟ್ಟ. ಾದ್ರೂ ಬಂದ್ಹೋಗೋದೇನೂ ಬಿಡಲಿಲ್ಲ. ನೋಡಿದಿಲ್ಲೊ, ಈವತ್ತ ಂಥಾ ಮಾಲೆ ತಂದಿದ್ದ? ಇವರು "ಒಲ್ಲೆ" ಅಂದ್ಕೂಡಲೆ ಅವನ ಮೋರೆ ಪ್ಪಗಾಗಿತ್ತು. ಪಾಪ! ಏನೇ ಇರಲಿ. ಇಂಥಾ ವ್ಯಾಳ್ಯಾಕ್ಕ ಇವರ್ನ ನೆನಿಸಿ ಇನ್ನೂ ಮಾನ-ಮರ್ಯಾದೆ ತೋರಿಸ್ತಾನ, ಅಷ್ಟೇ ಸಾಕು. ಹೌದಂತೀಯೊ, ಇಲ್ಲೋ, ವೆಂಕಣ್ಣಾ? ಮನುಷ್ಯ ಮಾಡಿದ್ದೇನು ಇಂದಿಲ್ಲ ನಾಳೆ ಮರೆತೀತು; ಆದರ ಅವನ ಮನಸ್ಸು ದೊಡ್ಡದಿದ್ದರ ಕಡೆ ನಕ ನೆನಪಿಡತಾರ ಜನ. ಹೌದೋ, ಇಲ್ಲೊ, ಹೇಳು.

ವೆಂಕಣ್ಣ:-(ಚಹ ಕುಡಿಯುವದನ್ನು ಮುಗಿಸುತ್ತಾ) ಹೌದು ರಂಗಮ್ಮ, ೀವು ಹೇಳೂ ಹಂಗ ಮನಸ್ಸೇ ಮುಖ್ಯ.

(ಶಾಮು:-ಚಹ ಕುಡಿದುಮುಗಿಸಿ) ಹೌದು ಹೌದು, ನೀವಿಬ್ಬರೂ ಹೇಳೂ

ಹಂಗ ಮನಸೇ ಮುಖ್ಯ. ಹೌದು.

ರಂಗವ್ವ:-(ವಾತ್ಸಲ್ಯದ ಸಿಡುಕಿನಿಂದ) ಸಾಕ್ಬಿಡೋ, ನಿನಗಂದ್ರ ಎಲ್ಲಾ ಚಾಷ್ಟೀನೆ!

ಶಾಮು:-(ಏಳುತ್ತಾ) ಅಲ್ಲ. ಅವ್ವ; ಮನಸ್ಸು ಒಳಗ ಇರ್ತದ, ನಮಗ ಕಾಣಿಸೋದಿಲ್ಲ, ತಿಳಿಯೋದೂ ಇಲ್ಲ. ಅದಕೇ ಅದು ಮುಖ್ಯ ಅಂತ ಹೇಳೋದು. (ಎನ್ನುತ್ತ ಕಪ್ ಉಗಳನ್ನು ಎತ್ತಿಕೊಂಡು ಹೋಗುವಷ್ಟರಲ್ಲಿ)

["ಶಾಮರಾಯರ, ರಂಗವ್ವಾ" ಎಂದು ಉತ್ಸಾಹದ ಆವೇಶದಲ್ಲಿ ಕೂಗುತ್ತಾ ಹೊರಗಿನಿಂದ ಗೋವಿಂದಪ್ಪನು ಬರುವನು. ಮಿಕ್ಕ ಮೂವರೂ ಚಕಿತರಾಗುವರು. ಅವರ ಮುಖದಲ್ಲಿ ಹೆದರಿದ ಕಳೆ ಮೂಡುವದು.]

ವೆಂಕಣ್ಣ:- } (ಒಂದೇ ವೇಳೆಗೆ) { ಎಲ! ಇಷ್ಟು ಲಗೂ ಮುಗೀತೇನು?
ಶಾಮು:- } (ಒಂದೇ ವೇಳೆಗೆ) { ಏನ್-ಏನಾಯ್ತು, ಗೋವಿಂದಪ್ಪ,
ರಂಗವ್ವ:- } (ಒಂದೇ ವೇಳೆಗೆ) { ಇವರೆಲ್ಲಿದ್ದಾರ? ಬಂದ್ರೇನೂ?

ಗೋವಿಂದಪ್ಪ:-(ನಗೆಮೊಗದಿಂದ, ಉಸಿರನ್ನು ತೆಗೆದುಕೊಳ್ಳುತ್ತ, ಬೆವರೊರಸಿಕೊಳ್ಳುತ್ತಾ) ಸಭಾ ಮುಗೀತು. ಏನೂ ಆಗಿಲ್ಲ. ಬರ್ತಾರ, ರಾಯ್ರು ಹಿಂದಿನಿಂದ ಹೊರಟಾರ. ಆದರೆ—ಆದರೆ—ವೆಂಕಣ್ಣಾ, ನೀವು ಅಲ್ಲಿ ಇರ್ಬೇಕಾಗಿತ್ತು. ಅಬ! ಅದೆಂಥಾ ದೃಶ್ಯ! ಶಾಮಣ್ಣಾ, ಸಾವಿರ ಗಟ್ಟಲೆ ಮುಕರಿದ ಜನ ಅಂದ್ರ ರಾಯರ ಮಾತಿಗೆ ಮರುಳಾಗಿ ಹುಚ್ಚೆದ್ದು ಕುಣೀತು... ಕುಣೀತು!—ಅಂತೀನಿ... ರಂಗವ್ವನೋರೆ, ಈಗ ಆ ಜನ ಪ್ರಚಂಡ ಮೆರವಣಿಗೆಯನ್ನು ಹೊರಡಿಸೇದ, ರಾಯರ್ನ ಮನೆಗೆ ಮುಟ್ಟಿಸಲಿಕ್ಕೆ!

[ಶಾಮು-ವೆಂಕಣ್ಣ ಒಬ್ಬರೊಬ್ಬರ ಮುಖವನ್ನು ನೋಡುವರು.]

ರಂಗವ್ವ:-ಅಂಥಾದ್ದೇನಾಯ್ತು ಒಮ್ಮೆಲೆ, ಅಂತೀನಿ?

ಶಾಮು:-ಗೋವಿಂದಪ್ಪ, ಒಂದಿಷ್ಟು ಸುಧಾರಿಸಿಕೊಂಡು ತಿಳಿಯೊ ಹಾಂಗ ಹೇಳ್ಬಾರ್ದ?

ವೆಂಕಣ್ಣ:-ಹೌದು, That's right, ಗೋವಿಂದಪ್ಪ. "ವಿಶೇಷ ಸುದ್ದಿಗಾರರಿಂದ" ಅಂತ ಹಾಕಿ ಪೇಪರದೊಳಗ ಹಾಕಿ ಬಿಡ್ತೀನಿ.

ರಂಗವ್ವ:-(ಸಂಶಯದಿಂದ)ಅಲ್ಲ, ನೀವು ಹೋಗಿ ಎಷ್ಟೊತ್ತಾಯ್ತು?

ಇಷ್ಟ್ರಾಗೇ ಸಭಾ ಮುಗೀತು ಅಂತ ಹೇಳತೀ; ಇವರ ಲೆಕ್ಚರೇ ಆಗಿಲ್ಲೇನು? ಗೋವಿಂದಪ್ಪ?

ಗೋವಿಂದಪ್ಪ:-(ಈಗ ಶಾಂತನಾಗಿ) ಇಲ್ಲ - ಇಲ್ಲ - ಅಂದ್ರ ಆಯ್ತು, ಲೆಕ್ಚರು —

ವೆಂಕಣ್ಣ:-ಅದಿರ್ಲಿ, ಗೋವಿಂದಪ್ಪ, ಮೊದಲನಿಂದಲೆ ಹೇಳಿರಿ ನೋಡೋಣ.

ಶಾಮು:-ಹೌದು, ಹಂ... ಮೊದಲು ನೀವು ಇಲ್ಲಿಂದ ಹೊರಟಿರಿ—

ಗೋವಿಂದಪ್ಪ:-ಹೇಳ್ತೀನಿ...ನಾವು ಇಲ್ಲಿಂದ ಹೊರಟೆವಿ. ಅಲ್ಲಿ ಹೋಗೋದ್ರಾಗ ಜನಾ ಮುಕರಿತ್ತು ಮೋಟಾರಿನಿಂದ ಇಳಿದವರೆ ರಾಯರು ಬಿರಿಬಿರಿ ಧ್ವಜಸ್ತಂಭದ ಕಡೆ ನಡೆದರು ಎರಡೂ ಕಡೆ ಸ್ವಯಂಸೇವಕರು.... ನಡುವೆ ಹಾದಿ....ಹೋದವರೆ ಧ್ವಜ ಏರಿಸಿದರು. ಧ್ವಜ ವಂದನೆ ಆಯ್ತು. ಅಲ್ಲೇ ಮಗ್ಗುಲಿಗೇ ಒಂದು ಎತ್ತರ ಕಟ್ಟೀ ಹಾಂಗ ಮಾಡಿದ್ರು. ಅದನ್ನ ಹತ್ತಿದ್ರು ರಾಯ್ರು. ಹನ್ಮಂತಪ್ಪನೂ ಹಿಂದಿನಿಂದ ಜಿಗಿದು ಕಟ್ಟಿ ಹತ್ತಿದ. ರಾಯರಿಗಾಗಿ ಸ್ವಾಗತ ಭಾಷಣ ಮಾಡ್ಬೇಕು ಅಂತ ಹನ್ಮಂತಪ್ಪ ಬಾಯಿ ತೆರೆಯೂದರೊಳಗ ರಾಯರು ಮುಂದಾಗಿ ಅವನ್ನ ಮೆಲ್ಲಗೆ ಹಿಂದೆ ಸರಿಸಿ ಭಾಷಣಕ್ಕ ನಿಂತರು. ರಾಯರ ಆ ಧೀರೋದಾತ್ತ ಆವೇಶ ನೋಡಿ ಜನ ಸ್ತಬ್...ಬ್ಧ ಆಯ್ತು. ರಾಯ್ರು ಸಣ್ಣದನಿಯೊಳಗೇ ಸುರೂ ಮಾಡಿದರು, ನನ್ನಂಥಾ ಮುದಕನ್ನ ಯಾಕ ಕರೆದರೋ ಗೊತ್ತಿಲ್ಲ, ಅಂದ್ರೂ. ಆದ್ರೂ ಬಂದೀನಿ....ನಾಲ್ಕು ಮಾತ ಹೇಳ್ತೀನಿ ಇಷ್ಟೆ... ಮನಸಿನಾಗ ಇದ್ದದ್ದನ್ನೆ ಹೇಳ್ತೀನಿ-ಅನ್ನೊದೊಂದೇ ತಡ "ಮಹಾತ್ಮಾ ಗಾಂಧೀಕೀ ಜೈ", "ಜಯರಾಯ ಝಿಂದಾಬಾದ" ಎಂದು ಮೂವತ್ತ ಸಾವಿರ ಜನಾ ಒಂದೇ ಗಂಟಲಿನಿಂದ ಕೂಗಿತು! ಮತ್ತೆ ಒನ್ಮೆಲೆ ಜನ ಶಾಂತ ಆಯ್ತು—ಆಗ ಸುರುವಾಯ್ತು ಅಂತಿರಿ; ರಾಯರ ಭಾಷಣ! ಅಬ್ಬಬ್ಬ! ಅದನ್ನ ಕೇಳಿದರ ಜನ್ಮ ಸಾರ್ಥಕ ಅನ್ನಬಹುದು. ಎಂತಹ ಭಾಷಣ! ಅದೇನು ಜನ ಘೋಷ! ಅದೆಂತಹ ಉತ್ಸಾಹ! ಇನ್ನೂ ಇಡಿಯ ಭಾಷಣದ ಒಂದೊಂದು ಶಬ್ದ ನನಗ ಕೇಳಸ_ ೯ ದ, ಆ ದೃಶ್ಯ ಕಣ್ಮುಂದ ಕಟ್ಟೇದ—

[ಈಗ ರಂಗಸ್ಥಲದಲ್ಲಿದ್ದ ವ್ಯಕ್ತಿಗಳು ಪೂರ್ತಿಯಾಗಿ ಕಾಣದಂತೆ ಕತ್ತಲನ್ನು ಮಾಡಬೇಕು. ಪ್ರೇಕ್ಷಕರ ಎದುರಿನ ಬದಿಗೆ ತುಸು ಎತ್ತರದ ಮೇಲೆ ಜಯರಾಯರನ್ನು ತೋರಿಸಬೇಕು. ಅವರ ಮುಖದ ಮೇಲಷ್ಟೆ ಪ್ರಕಾಶವಿರಬೇಕು. ಮುಂದೆ ಕಾಣಿಸಿದಂತೆ ಜಯರಾಯರ ಭಾಷಣ ನಡೆದಾಗ ಅಲ್ಲಲ್ಲಿ ಜಯಘೋಷ ಕೇಳಬರಬೇಕು. ತುಸುದೂರದಿಂದ ಕೇಳಬರುವದು ಎಂಬಂತಿರಬೇಕು.]

ಜಯರಾಯರ ಮುಖ:-ಗಾಂಧಿ ಅವರಿಗೆ ಜೈ ಅಂತೀರಿ. ಆದರೆ ಅವರಿಗೆ ಜಯ ತಂದು ಕೊಡೋದು ನಿಮ್ಮ ಕೈಯೊಳಗೆ ಇದೆ. ನಮ್ಮಲ್ಲಿಯ ದುರ್ಗುಣ ಹೋಗಬೇಕು, ನಮ್ಮ ಜನರ ಬಡತನ ಮಾಯ ಆಗಬೇಕು, ನಮ್ಮ ಆರೋಗ್ಯ ಸುಧಾರಿಸಬೇಕು, ನಮ್ಮಲ್ಲಿ ನಿಸ್ವಾರ್ಥ ಸಾಮಾಜಿಕ ಬುದ್ಧಿ ಬರಬೇಕು. ಆಗ ಗಾಂಧಿ ಅವರಿಗೆ ಜಯ (ಜನಘೋಷ); ಬ್ರಿಟಿಶರು ನಮ್ಮನ್ನ ಬಡವನ್ನ ಮಾಡಿದರು ಅಂತೀವಿ. ಅವರು ಹೋದರು. ಅಷ್ಟಕ್ಕೆ ನಾವು ಶ್ರೀಮಂತರಾಗತೀವೇನು ? ಅಂದರ್‍ಯಾಕ ನಮಗ ಉತ್ಸವ? ನಮ್ಮ ಅರಿವೆ ನಾವೇ ಮಾಡಿಕೊಳ್ಳೋಣ, ನಮ್ಮ ಹುಡುಗರಿಗೆ ನಾವೇ ಕಲಿಸೋಣ, ನಮ್ಮ ಊರುಕೇರಿ ನಾವೇ ಕಸ ತೆಗೆಯೋಣ, ಅಂದ್ರೆ ನಂದುಡ್ಡು ಉಳೀತದ, ನಾವು ಶ್ರೀಮಂತರಾಗ್ತೀವಿ. ನೀವು ಇದಕ್ಕ ತಯಾರ ಇದ್ದೀರಾ ? ("ಇದ್ದೀವಿ." "ಓಹೋ." "ಜಯರಾಯರು ಝಿಂದಾಬಾದ") ರಸ್ತೆ ಹಾಕಬೇಕು, ಕೆರೆ ಕಟ್ಟಬೇಕು, ಕಾಲುವೆ ಅಗೀಬೇಕು. ಇದಕ್ಕ ತಯಾರ ಇದ್ದೀರಾ ? (ಮೊದಲಿನಂತೆ) ನಾವೆಲ್ಲಾರೂ ಒಂದು, ("ಮಹಾತ್ಮಾ ಗಾಂಧೀಕಿ ಜೈ") ನಾವೆಲ್ಲಾರೂ ಒಂದು, ನಮಗ ಪಾರ್ಟಿ ಇಲ್ಲಾ, ನಮಗ ಅಧಿಕಾರ ಬ್ಯಾಡಾ. ನಮಗ ಸೇವಾ ಮಾಡೋದು ಬೇಕು. ಇದಕ್ಕೆಷ್ಟು ಜನ ಸಿದ್ಧ ? ("ಎಲ್ಲಾರೂ") ಈ ಹೊತ್ತು ನಾವು ಪ್ರತಿಜ್ಞಾ ಮಾಡೋಣ. ದೇಶಕ್ಕ ಸ್ವಾತಂತ್ರ್ಯ ಸಿಕ್ಕಿತು; ಸ್ವಾತಂತ್ರ್ಯ ನಾವು ಗಳಿಸಿದ್ದಲ್ಲ. ಆದರೆ ಸಿಕ್ಕ ಸ್ವಾತಂತ್ರ್ಯದ ಲಾಭ ಪಡೆದು ಸ್ವರಾಜ್ಯಗಳಿಸೋಣ, ಗಾಂಧಿ ರಾಜ್ಯ ನಿರ್ಮಿಸೋಣ. ನಮ್ಮೂರ ಮಟ್ಟಿಗೆ ಒಂದು ವರ್ಷದಲ್ಲಿ ಸ್ವರಾಜ್ಯ ತರ್‍ತೀವಿ ಅಂತ ಮಹಾತ್ಮರ ಹೆಸರಿನಿಂದಲೆ ಪ್ರತಿಜ್ಞೆ ಮಾಡೋಣ.

[ಮಹಾತ್ಮಾ ಗಾಂಧೀಕಿ ಜೈ, ಒಂದೇ ಮಾತರಂ; ಜಯರಾಯರಿಗೆ ಜಯವಾಗಲಿ; ಮುಂತಾದ ಘೋಷಗಳು ನಡೆದಾಗ ಕ್ರಮೇಣ ರಂಗಸ್ಥಲವನ್ನು

ಪ್ರಕಾಶನುಯವಾಗಿ ಮಾಡಬೇಕು. ದೃಶ್ಯ ಮೊದಲಿನಂತೆಯೆ. ಇಷ್ಟೆ, ಮಿಕ್ಕ ಮೂವರು ಚಕಿತರಾಗಿ ಗೋವಿಂದಪ್ಪನನ್ನು ನೋಡುತ್ತಿದ್ದಾರೆ. ಶಾಮನ ಕೈಯಲ್ಲಿ ಕಪ್ ಉಗಳು ಇದ್ದಂತೆಯೆ ಇರತಕ್ಕದ್ದು. ಗೋವಿಂದಪ್ಪನು ಅತ್ಯಂತ ಉಲ್ಲಸಿತವದನನಾಗಿ ಬೆವರನ್ನೊರಿಸಿಕೊಳ್ಳುತ್ತಿದಾನೆ. ಇಷ್ಟರಲ್ಲಿ ಈ ಮೊದಲು ಕಾಣಿಸಿದ ಜಯಘೋಷಗಳು ಹೊರಗೆ ದೂರದಿಂದ ಹತ್ತಿರ ಬರುವಂತೆ ಕೇಳಬರುವವು.]

ಗೋವಿಂದಪ್ಪ:- (ಮತ್ತೆ ಉತ್ಸಾಹದಿಂದ ಪುಟಿದು) ಬಂತ ಕಾಣಸ್ತದ ಮೆರವಣಿಗೆ! (ಎಂದು ಹೊರಬಾಗಿಲ ಕಡೆಗೆ ಓಡುವನು.)

[ಮಿಕ್ಕ ಮೂವರೂ ಸ್ತಂಭೀಭೂತರಂತೆ ನಿಂತಿರುವಾಗ]

[ ತೆರೆ ]

## ಅಂಕ ೨.

### ದೃಶ್ಯ ೧

(ಹನ್ಮಂತಪ್ಪನ "ಕಚೇರಿ". ಹೋದ ಅಂಕದಲ್ಲಿ ಜರಗಿದ ಸಂಗತಿಗಳ ಮೂರು ತಿಂಗಳ ತರುವಾಯದ ಸಮಯ. ಮಧ್ಯಾಹ್ನದ ನಾಲ್ಕು ಗಂಟೆ. ರಂಗಸ್ಥಲದಲ್ಲಿ ಎದುರು ಹನ್ಮಂತಪ್ಪ, ಅವನ ಮುಂದೆ ಒಂದು ಇಳಿಜಾರಾದ ಮೇಜು, ಅದರ ಮೇಲೆ ಬರೆಯುವ ಉಪಕರಣಗಳು ಮತ್ತು ಒಂದು ಕೈ ಗಂಟೆ. ಗೋಡೆಗೆ ಇಟ್ಟ ತೆಕ್ಕೆಗೆ ಹನ್ಮಂತಪ್ಪ ಆತುಕೊಂಡು, ಎರಡೂ ಕಾಲ್ಗಳನ್ನು ಡೆಸ್ಕಿನ ಮೇಲೆ ಚಲ್ಲಿದ್ದಾನೆ. ತಲೆಯಮೇಲೆ ಟೊಪ್ಪಿಗೆ ಇಲ್ಲ. ಮುಖದಲ್ಲಿ ಒಂದು ತರದ ಹೆಮ್ಮೆ-ಸಂತಸಗಳ ಮಿಶ್ರಿತ ಕಳೆ-ಅದರಲ್ಲಿ ಹಿರಿತನದ ಛಾಯೆಯೂ ಇದೆ. ಅವನು ಸುಮ್ಮನೆ ತನ್ನ ಸಂಗಡಿಗರನ್ನು ನೋಡುತ್ತಿದ್ದಾನೆ. ಯಾಕೆಂದರೆ ಈ ಸಂಗಡಿಗರ ಕೋಲಾಹಲಕ್ಕೆ ಹೆದರಿದಂತೆಯೆ ತೆರೆ ಎದ್ದಿದೆ. ಇವರು ನಾಲ್ವರಿದ್ದಾರೆ. ಎಲ್ಲರೂ ಖಾದಿ-ಧಾರಿಗಳು. ಸಧ್ಯಕ್ಕೆ ಒಬ್ಬನು ತೋಳನ್ನೇರಿಸುತ್ತ ಇನ್ನೊಬ್ಬನಿಗೆ "ಯಾವ ಹೇಳ್ತಾನ ಹೇಳಲಿ? ಬಂದರೆ ಬರಲಿ" ಎನ್ನುತ್ತಿದ್ದಾನೆ. ಇನ್ನೊಬ್ಬನು "ನಾಚಿಕೆ ಆಗ್ಬೇಕು, ನಿನಗೆ ನಾಚಿಕೆ, ಮತ್ತೆ ಮಾತಾಡ್ತಾನ" ಎನ್ನುತ್ತಿದ್ದಾನೆ. ಇವರಿಬ್ಬರೂ ಹನ್ಮಂತಪ್ಪನ ಬಲಬದಿಗೆ. ಇದಿರು ಇನ್ನಿಬ್ಬರಿದ್ದಾರೆ. ಇವರಲ್ಲೊಬ್ಬನು "ನಾ ಹೇಳ್ದೆ, ಹನ್ಮಂತಪ್ಪಗ. ಹೇಳೇನ್ಯೋ ಇಲ್ಲೊ, ಕೇಳು" ಎನ್ನುತ್ತಿದ್ದಾನೆ. ಉಳಿದ ಒಬ್ಬನು ಖಾದಿ ಮುಂಡಾಸವನ್ನು ಸುತ್ತುತ್ತಿದ್ದಾನೆ. ಈ ನಾಲ್ವರಿಗೂ ಅವರವರ ಬದಿಗೆ ಆತುಕೊಳ್ಳಲು ಲೋಡುಗಳಿವೆ. ಒಂದು ನಿಮಿಷ ಈ ಕೋಲಾ

ಹಲ ಹೀಗೇ ನಡೆದು ಪ್ರೇಕ್ಷಕರಿಗೆ ಒಂದು ಶಬ್ದವೂ ಕೇಳಬರುವದಿಲ್ಲ. ಆಮೇಲೆ ಮೂವರೂ ಶಾಂತರಾಗುವರು. ನಂತರ ಒಬ್ಬೊಬ್ಬರಾಗಿ ಉಸಿರನ್ನೆಳೆದಂತೆ ಮಾಡಿ—)

೧ನೆಯವ:-ಯಾವ ಹೇಳ್ತಾನ ಹೇಳಲಿ ? ಹೇಳಲಿ ಅಂದೆ. ಹೇಳಲಿ ಇಲ್ಲೆ ಬಂದು ಬಂದರೆ ಬರ್ಲಿ.

೨ನೆಯವ:-(೧ನೆಯವನಿಗೆ) ಹೀಂಗ ಅನ್ನಲಿಕ್ಕೆ ನಿನಗ ನಾಚಿಕೆ ಆಗ್ಬೇಕಿತ್ತು, ನಾಚಿಕೆ ! ತಿಳೀತೇನು ? ರಾಮಣ್ಣ ? ಮತ್ತೆ ಮಾತ ಆಡ್ತೀ!

೩ನೆಯವ:-(೨ನೆಯವನಿಗೆ) ರಾಮಣ್ಣನ ಮಾತು ಬಿಡು. ನಾ ಹನ್ಮಂತಪ್ಪಗ ಮುಂಚೇ ಹೇಳಿದ್ದೆನೊ ಇಲ್ಲೊ, ಕೇಳು; ಅಕಾ ! ಕೇಳು ಹನ್ಮಂತಪ್ಪಗ ! ಶೀನಪ್ಪ, ಕೇಳೂ ಅಂತೀನಿ.

ಶೀನಪ್ಪ:-(ತಿರಸ್ಕಾರದಿಂದ) ಕೇಳೋದಾದ್ರ ಕೇಳು ನೀನೆ, ನಿನ್ನ ಎದುರೇ ಕೂತಾನ ಹನ್ಮಂತಪ್ಪ. ಸೆಕ್ರೆಟರಿ ಆದರ ನಿನ್ನಷ್ಟಕ್ಕ ನೀ ಆದಿ, ನನಗ ಆರ್ಡರ ಕೊಡಬೇಡ.

ರಾಮಣ್ಣ:-ಸೆಕ್ರೆಟರಿ ಹೇಳಿದ್ದು ಕೇಳ್ದಿದ್ರ ಯಾರ ಸೆಕ್ರೆಟರಿ ಆದಾರು? ಯಾಕಪ್ಪಾ, ಸೆಕ್ರಟರಿ ?

(ಇಲ್ಲಿಗೆ ಮಾತು ನಿಂತಂತಾಗುವದು. ಮೂವರು ಒಬ್ಬರೊಬ್ಬರನ್ನು ನೋಡುವರು. ಆಮೇಲೆ ಹನ್ಮಂತಪ್ಪನನ್ನು ನೋಡುವರು. ಆವನು ಲಕ್ಷ್ಯವಿಲ್ಲದಂತೆ ಮಾತನಾಡದೆ ಕುಳಿತಿರುವನು. ಆಗ ನಾಲ್ಕನೆಯವನು ಮುಂಡಾಸ ಸುತ್ತಿಕೊಂಡು ಸಿಟ್ಟಿನ ಕಳೆಯುಂವಲೆ ಏಳುವನು. ಹನ್ಮಂತಪ್ಪನು ಅವನನ್ನು ನೋಡಿ, ಕಾಲ್ಗಗಳನ್ನು ಡೆಸ್ಕಿನಿಂದ ತೆಗೆದುಕೊಳ್ಳುತ್ತ—)

ಹನ್ಮಂತಪ್ಪ:-ಹೊರಟೆ ಅಲ್ಲೊ, ಭೀಮಣ್ಣಾ ?

ಭೀಮಣ್ಣ:-ಇದೇನು ಕಮೀಟೆನೋ, ಏನ ಊಟ ಬುದ್ಧಿಗ ಕಮೀನೊ? (ಹೊರಡುವನು)

ಹನ್ಮಂತಪ್ಪ:-(ತುಸು ಅಧಿಕಾರದಿಂದ) ಭೀಮಣ್ಣಾ, ದೇಶ ಈಗ ಸ್ವತಂತ ಆಗೇದ. ಈಗ ನಾವೆಲ್ಲರೂ ಸ್ವತಂತ್ರರೆ, ನಂನಂ ಮನಸಿನೊಳಗಿದ್ದದ್ದನ್ನ ಹೇಳಲಿಕ್ಕೆ ಯಾರಿಗೆ ಹ್ಯಾಂಗ ಬರ್ತದ ಹಂಗ ಹೇಳ್ತಾರ ಒದರಿ ಹೇಳುವವರು ಒದರಿ ಹೇಳ್ತಾರ, ಕಸರತ್ತಮಾಡಿ ಹೇಳುವವರು ತೋಳ ಏರಿಸಿ ಹೇಳ್ತಾರ. ಅವರ್ದು ಮುಗೀತು. ನಿಂದು ಹೇಳೋದು ನೀ ಹೀಳು, ಆಮ್ಯಾಲೆ ಕಮೀಟ

ವಿಚಾರ ಮಾಡ್ತದ. (ಭೀಮಣ್ಣನು ಅನುಮಾನಿಸಲು) ಕೂಡು ಅಂದೆ... ಕಮೀಟಿ ಸುರು ಆಗಲಿ.

ಭೀಮಣ್ಣ:-ಕೂತು ಏನ್ಮಾಡೋದೊ ಕುಸ್ತಿ ನಡೆದಾಗ? (ಎಂದು ಗೊಣಗುತ್ತ ಕುಳಿತು ಕೊಳ್ಳುವನು.)

ಹನ್ಮಂತಪ್ಪ:-ಏನ್ಮಾಡೋದಂದ್ರ? ಈಗ ನಡೆದ ಮಾತಿಗೆ ನೀ ಅನ್ನೋ ದೇನು? ಹೇಳಲ್ಲ? ಕಮೀಟಿ ಮೆಂಬರ ಅನಿಸಿಗೊಳ್ಳಲಿಕ್ಕೆ ಬೇಕು, ಮಾತಾ ಡ್ಲಿಕ್ಕೆ ಬ್ಯಾಡ?

ಭೀಮಣ್ಣ:-(ಬೇಜಾರದಿಂದ) ಹನ್ಮಂತಪ್ಪ, ನನಗ ಒಣ ಗದ್ದಲ ಬ್ಯಾಡ. ಆದರೂ ಒಂದ್ಮಾತ ಹೇಳ್ತೀನಿ. ಆ ಜಯರಾಯನ್ನ ನೀ ಏರಿಸಿ ಕೂಡಿಸಿದ್ದಿಲ್ಲಾ ಅಂದ್ರ ಮ್ಯುನಸಿಪಾಲ್ಟಿ ಇಲೆಕ್ಶನ್ನ ಹೀಂಗ ಆಗ್ತಿದ್ದಿಲ್ಲಾ.

ರಾಮಣ್ಣ:-(ತ್ವೇಷದ ಹಟದಿಂದ) ಹಂ—ಹೇಳಲಿ, ಬೇಕಾದವರು—

ಹನ್ಮಂತಪ್ಪ:-(ಕೈಗಂಟೆಯನ್ನು ಬಾರಿಸುತ್ತ) ಆರ್ಡರ! ನಡುವೆ ಮಾತಾಡಬ್ಯಾಡ. ಮೊದಲು ಭೀಮಣ್ಣನ್ದು ಮುಗೀಲಿ. (ಭೀಮಣ್ಣನಿಗೆ) ಹೀಂಗ ಆಗ್ತಿದ್ದಿಲ್ಲಾ ಅನ್ನಲಿಕ್ಕೆ ಮುನಸೀಪಾಲ್ಟಿ ಇಲೆಕ್ಶನ್‌ದಾಗ ಏನಾಯ್ತು ಅಂತೀ? ಮಂದಿ ಜಯರಾಯಗ ಹೋಟ ಕೊಟ್ಟರ ಅವರ ಕೈ ಹಿಡಿದು 'ಬ್ಯಾಡ' ಅನ್ನಲಿಕ್ಕೆ ಬರ್ತದ?

ಸೆಕ್ರೆಟರಿ:-ನೀ ಜಯರಾಯನ್ನ ಅಂದು ಮುಂದು ಮಾಡಿದ್ದಿಲ್ಲಾ ಅಂದ್ರ ಮುಂದಿ ಅವನ ಹೆಸರ್ನ ಸಹಿತ ಕೇಳಿರತಿದ್ದಿಲ್ಲಾ.

ಹನ್ಮಂತಪ್ಪ:-(ಗಂಟೆಬಾರಿಸಿ)ಆರ್ಡರ!—ಸೆಕ್ರೆಟರಿ ನೀ; ನಡೆದದ್ದನ್ನ ನೋಡ್ತಬಾ, ಬರಕೋತ ಬಾ, ಮಾತಾಡಬ್ಯಾಡಾ.

ರಾಮಣ್ಣ:-ಆ ಮುದಕನ ಕಾಲುಬಿದ್ದು ಮ್ಯಾಲ ಏರಿಸಿದ್ದಿಲ್ಲ ಅಂದ್ರ ಅವ ಇಲೆಕ್ಶನ್ನಕ ನಿಂದರತಿದ್ದಿಲ್ಲ.

ಹನ್ಮಂತಪ್ಪ:-(ಗಂಟೆಬಾರಿಸಿ) ಆರ್ಡರ—

ರಾಮಣ್ಣ:-(ಸಿಟ್ಟಿಗೆದ್ದು)ಏನು ಆಡರ್ ಆಡರ್ ಅಂತ ಹಚ್ಚೀದ್ಯೊ?

ಎಲ್ಲಾರೂ ತಮ್ಮ ತಮ್ಮದು ಹೇಳಲಿಕ್ಕೆ ಸ್ವತಂತ್ರ ಅಂತೀ; ಬಾಯಿ ತೆರೆಯೂದು ಒಂದೇ ತಡ, ಗಂಟೀ ಬಡೀತೀ!

ಶೀನಪ್ಪ:-ನಿಂದು ಹೇಳೋದು ಮುಗಿದದಲ್ಲ—

ರಾಮಣ್ಣ:-(ಕನಲಿ) ಗಂಟೆ ಬಾರಿಸಿ ಕೈ ಸೋತಿತು ಅಂತ ನಿನ್ನ "ಛೂ" ಬಿಟ್ಟಾನೇನು?

ಹನ್ಮಂತಪ್ಪ:-ಶೀನಪ್ಪಾ, ತುಸು ತಡೆ. ಈ ಹೊತ್ತು ಈ ವಿಚಾರ ಮುಗಿಸಿಯೆ ಮನೆಗೆ ಹೋಗೋಣ. ತುಸು ತಡೆ.

ಶೀನಪ್ಪ:-(ತಡೆದ ಸಿಟ್ಟು ಭುಗಿಲೆಂದು) ಏನದು ತಡೆಯೋದು, ಹನ್ಮಂತಪ್ಪಾ? ಯಾವ ಮನುಷ್ಯ ಅಧ್ಯಕ್ಷ ಆದ ನಿನ್ನ ಪಾರ್ಟಿಯಿಂದ ಹೊರಗ ಹಾಕಬೇಕಂತಾನ ಅವನ ಮಾತ ತಡೆಯೂದಂದ್ರ—?

ಹನ್ಮಂತಪ್ಪ:-(ಕೆಣಕುವ ನಗೆಯಿಂದ) ಹೌದೇನು, ರಾಮಣ್ಣಾ? ಈ ಜಾಗಾದಾಗ ನಿನಗ ಬರ್ಬೇಕಾಗೇದೇನು? ಹೌದಂತ ಹೇಳು, ಬಿಟ್ಕೊಡ್ತೀನಿ.

ರಾಮಣ್ಣ:-ನಾ ಏನು ಬಿಕ್ಕೆ ಬೀಡ್ಲಿಕ್ಕೆ ಬಂದಿಲ್ಲ!

ಹನ್ಮಂತಪ್ಪ:-(ಒಮ್ಮೆಲೆ ಅಧಿಕಾರ ವಾಣಿಯಿಂದ) ಹಾಗಾದ್ರ ಸಿಕ ಸಿಕ್ಹಾಂಗ ಯಾಕ ಮಾತಾಡ್ತಿ?

ರಾಮಣ್ಣ:-(ಅವಮಾನಿತನಾಗಿ) ನಾ ಬೇಕಾದ್ದನ ಮಾಡ್ತೀನಿ, ನೀ ಯಾರು ಕೇಳಲಿಕ್ಕೆ?

ಹನ್ಮಂತಪ್ಪ:-(ಕೆಣಕುತ್ತ) ನೋಡು ನೀನು ಬೇಕಾದ್ದನ್ನ ಮಾಡಿ, ಬೆಳಗಾಗೂದ್ರೊಳಗ ನಿನಗೆ "ಗೂಂಡಾ ಕಾಯಿದೆ" ಹಚ್ಚಸಲಿಲ್ಲ ಅಂದ್ರ ನನ್ನ ಹೆಸರು ಹನ್ಮಂತಪ್ಪ ಅಲ್ಲ.

ಸೆಕ್ರೆಟರಿ:-(ಸಮಾಧಾನದಿಂದ) ಹೋಗಲಿಬಿಡು, ಹನ್ಮಂತಪ್ಪಾ. ರಾಮಣ್ಣಾರೂ ಯಾಕ ಇಂಥಾಪರಿ ಮಾತಾಡ್ತಾನ? ಸ್ವಾತಂತ್ರ್ಯದ ಸಲುವಾಗಿ ೮-೧೦ ವರ್ಷ ನಾವೂ ನೀವೂ ಬೇಕಾದ್ದನ್ನ ಮಾಡಿದಿವಿ. ಹೀಂಗಿದ್ದರೂ ಒಂದು ದಿನ ಧ್ವಜ ಏರಿಸಿದ್ದಕ್ಕ ದೊಡ್ಡಮನುಷ್ಯ ಆಗಿ ಈ ಜಯ

ರಾಯ ಮ್ಯುನಸಿಪಾಲ್ಟಿ ಇಲೆಕ್ಶನ್ನಕ್ಕ ನಿಂತ್ರು, ಆರಿಸಿ ಬಂದು ಮತ್ತೆ ಈಗ ಪ್ರೆಸಿಡೆಂಟ ಆಗ್ಬೇಕಂತಾನ ! ಹೊಟ್ಟೀವಳಗ ಯಾರಿಗೆ ಬೆಂಕಿ ಬೀಳಲಿಕಿಲ್ಲಾ ?

ಹನ್ಮಂತಪ್ಪ:-ನನ್ಗೇನು ಅದು ಬಹಾಳ ಖುಷಿ ಅಂತ ತಿಳಿದೀರೇನು ?

ಶೀನಪ್ಪ:-ನಾನೂ ಅದ್ನೆ ಹೇಳ್ತೀನಿ. ಮ್ಯುನಸಿಪಾಲ್ಟಿ ಪ್ರೆಸಿಡೆಂಟಕೀ ಅಂದ್ರ ಗಾಳೀಲೆ ತೂರಿಬಂದ ಮಾಲೆ ಹಂಗ ಹನ್ಮಂತಪ್ಪನ ಕೊರಳೊಳಗ ಬೀಳ್ಬೇಕಾಗಿದ್ದು— .

ರಾಮಣ್ಣ:-(ನಡುವೆಯೆ) ಈಗ ಅದರ ಬದ್ಲಿ ಉರ್ಲ ಹಂಗ ಬಂತು. ಅದಕ್ಕ ಒದರಾಡ್ತೀನೊ, ಮಹಾರಾಯಾ !

ಭೀಮಣ್ಣ:-ಆದರೆ ಮುಂದಿನ ವಿಚಾರ ಏನೂ ಅಂತ ?

ಹನ್ಮಂತಪ್ಪ:-ಅದ್ನೆ ಮಾತಾಡೋಣ ಅಂತ ಈಗ ಕೂಡಿದ್ದು, ಜಯರಾಯನ ಬಾಬ್ತಿ ನಾ ಕೈ ಸುಟಗೊಂಡೆ ಅಂತ ನಾನೇ ಹೇಳ್ತೀನಿ—

ರಾಮಣ್ಣ:- } (ಒಂದೇವೇಳೆಗೆ) ಈ ಮಾತ ಹೇಳಪಾ !
ಸೆಕ್ರೆಟರಿ:- } (ಒಂದೇವೇಳೆಗೆ) ಅದೇ ನಾವಂದದ್ದು !

ಹನ್ಮಂತಪ್ಪ:-(ಹಿರಿತನದಿಂದ) ಅಲ್ಲರ್ಯ್ಯೋ, ಹೆಂತಾ ಹುಚ್ಗೋಟ ನೀವೂ ಅಂತೀನಿ. ಈ ಜಯರಾಯನ್ನ ಮುಂದೆ ತಂದವರ್ಯಾರು ? ಇಕ, (ಕೈಯಿಂದ ಅಭಿನಯಿಸುತ್ತ) ಹೀಂಗ ಕೈಯಿಂದ ಎಳೆದು ಮುಂದೆ ತಂದೆ, ಈಗ ಅದೇ ಕೈ ಮುಷ್ಟೀ ಬಿಗದು ಹಿಚಕ್ತೀನಿ, ಅವನ್ನ ಹಿಚಿಕಿ ಒಗೀತೀನಿ, ಅಂದೆ.

ಶೀನಪ್ಪ:-(ಹೆಮ್ಮೆಯಿಂದ ಮಿಕ್ಕ ಮೂವ್ವರಿಗೆ)ನಾ ಹೇಳಿದ್ದಿಲ್ಲ ನಿಮಗ ?

ಭೀಮಣ್ಣ:-ಆದರೆ, ಪ್ರೆಸಿಡೆಂಟನ ಇಲೆಕ್ಶನ್ ನಾಳೇ ಸಂಜಿಗೆ ಮರೀಬ್ಯಾಡ್ರಿ !

ಹನ್ಮಂತಪ್ಪ:-ನಾಳೆ ಸಂಜೀಗೇ ಅದ ಅಂತೀಯಲ್ಲ ? ಇರ್ಲಿ. ಜಯರಾಯನ ಪಾರ್ಟಿವಳಗ ಎಷ್ಟು ಜನ ಇದ್ದಾರಪ ?

ಸೆಕ್ರೆಟರಿ:-ಇದೇ ಫೋಟಾಳಿ ಆಗೇದ. ಆ ಮಹಾರಾಯರಗ ಪಾರ್ಟೀ ಅಂಬೂದs ಇಲ್ಲಾ—

ರಾಮಣ್ಣ:-(ನಡುವೆಯೆ) ಆದ್ರ ಆಯಿಕಾ ವ್ಯಾಳ್ಯಾಕ್ಕ ಎಲ್ಲಾರೂ ಅವನ ಕಡೀನೇ ಕೈ ಎತ್ತವರು!

ಶೀನಪ್ಪ:-ಯಾಕ! ನಾವೇನು ಸತ್ತೀವೇನು?

ಹನ್ಮಂತಪ್ಪ:-ಶೀನಪ್ಪ, ತುಸು ತಡಿ. (ರಾಮಣ್ಣಗ) ಅಲ್ಲಪಾ, ರಾಮಣ್ಣಾ, ಎಲ್ಲಾರೂ ಅವನ ಕಡೀನೇ ಕೈ ಎತ್ತಿದರು, ಅಂತ ತಿಳಿ. ಜಯರಾಯ ಪ್ರೆಸಿಡೆಂಟ ಆದ ಅಂತ್ಲೂ ತಿಳಿ. ನಿನ್ದೇನು ತಕರಾರು?

ಸೆಕ್ರೆಟರಿ:-ತಕರಾರೇನು? ನಾವೆಲ್ಲಾ ಕಾಂಗ್ರೇಸದ ಜನಾ ರಾಜೀನಾಮೆ ಕೊಟ್ಟು ನಂ ನಂ ಮನೀಗೆ ಹೋಗೋಣ.

ಹನ್ಮಂತಪ್ಪ:-ಅದ್ಯಾಕ, ಮತ್ತ ಜಯರಾಯನೂ ಕಾಂಗ್ರೆಸದವನೇ ಅಲ್ಲೇನು?

ರಾಮಣ್ಣ:-(ಆಸಹನೆಯಿಂದ) ಹಾಂಗಿದ್ರ ಅವನ್ನ ಇಲ್ಲಿಯೇ ತಂದು ನಿನ್ನ ಜಾಗಾಕ್ಕೇ ಕೂಡಿಸಿ ಬಿಡಲ್ಲಾ!

ಹನ್ಮಂತಪ್ಪ:-ನಾ ನಿಮ್ಹಂಗ ಮಳ್ಳ ಆಗಿದ್ರ ಇಷ್ಟೊತ್ತಿಗೆ ಅವ ತಾನಾಗಿಯೇ ಇಲ್ಲಿ ಬಂದು ಕೂಡ್ತಿದ್ದಾ,—

ಸೆಕ್ರೆಟರಿ:-(ನಡುವೆಯೆ) ಮತ್ತ ನಮ್ಮ ಮ್ಯಾಲೆ...

ಹನ್ಮಂತಪ್ಪ:–(ಗಂಟೆ ಬಾರಿಸಿ ಮುಂದುವರಿಯುತ್ತ) ಇಲ್ಲಿ ಬಂದು ಕೂಡ್ತಿದ್ದಾ, ನಿಂ ಧಡ್ಡತನಾ ಬೈಲಿಗೆಳೀತಿದ್ದಾ.

ಭೀಮಣ್ಣ:-ಇದೆಲ್ಲಾ ಆಯಿತಸಾ, ಹನ್ಮಂತಪ್ಪಾ. ಈಗ ನೀ ಅಧ್ಯಕ್ಷ ಇದ್ದೀ. ಏನ್ಮಾಡ್ಬೇಕು ಹೇಳ್ಬಿಡು.

ಶೀನಪ್ಪ:–ಮೈ ಮ್ಯಾಲಿ ಪೇಚಕ್ಕ ಬಂದಾಗ ಹನ್ಮಂತಪ್ಪ ಅಧ್ಯಕ್ಷ ನ್ನೋದು ನೆನಪಾಗ್ತದೇನೊ!

ರಾಮಣ್ಣ:-ಅಂದ್ರೇನು, ಅಧ್ಯಕ್ಷ ಇದ್ದದ್ದು ಸುಳ್ಳೇನು?

ಶೀನಪ್ಪ:-ಹಾಂಗಿದ್ರ, ಅಧ್ಯಕ್ಷ ಹೇಳ್ತಾರ ಹಾಂಗ ಕೇಳ್ರಿ.

ಸೆಕ್ರೆಟರಿ:-ಹೇಳಲಿ.

ಹನ್ಮಂತಪ್ಪ:-ನೀವೆಲ್ಲಾರೂ ನಾಹೇಳಿದ್ಹಾಂಗ ನಡಿಯೊ ವಚನಾ ಕೊಡ್ರಿ.

[ಶೀನಪ್ಪನನ್ನುಳಿದು ಮೂವರೂ ಒಬ್ಬರನ್ನೊಬ್ಬರು ಮುಖವನ್ನು ನೋಡುವರು.]

ಶೀನಪ್ಪ:-ಇದೋ, ನನ್ನ ವಚನ.

ಮಿಕ್ಕ<br>ಮೂವ್ವರೂ } (ಒತ್ತಾಯದಿಂದ ಎಂಬಂತೆ) ನಮ್ಮೂದ್ದ ವಚನ ತಗೋ, ಹೇಳು ಮುದಲ. ಮೊದಲು

ಹನ್ಮಂತಪ್ಪ:-ಇವತ್ತ ಸಂಜಿಗೆ ನಾ ಜಯರಾಯನ ಕಡೇ ಹೋಗ್ತೀನಿ—

ರಾಮಣ್ಣ:-ಮಾಲಿ ತೊಗೊಂಡೋ ಏನು?—

ಹನ್ಮಂತಪ್ಪ:-(ನಡುವಯೆ ಗಂಟೆ ಬಾರಿಸಿ) ಆರ್ಡರ ! ಆರ್ಡರ ! (ಮುಂದುವರಿಯುತ್ತ) ಜಯರಾಯನ ಕಡೆ ಹೋಗ್ತೀನಿ. ಮತ್ತ ಅವನಿಗೆ ಹೇಳ್ತೀನಿ. ಇಕ! ಜಯರಾಯ, ನಂ ಮ್ಯುನಸೀಪಾಲ್ಟೀಗೆ ನೀನೇ ಅಧ್ಯಕ್ಷ ಆಗ್ಬೇಕೂ ಅಂತ ಅನ್ನಿಸತದ—

ರಾಮಣ್ಣ:-<br>ಭೀಮಣ್ಣ:-<br>ಸೆಕ್ರೆಟರಿ:- } (ಒಂದೇವೇಳೆಗೆ) ಎಲ?<br>ಆಂ?<br>ಏನೂ?

ಶೀನಪ್ಪ:-ಸುಸು ತಡೀರಿ, ಮುಂದ ಕೇಳ್ರಿ, ಮುಂದ.

ಹನ್ಮಂತಪ್ಪ:-(ಮೇಲಿನದಕ್ಕೆ ಅಲಕ್ಷ್ಯಮಾಡಿ) ನೀನೇ ಅಧ್ಯಕ್ಷ ಆಗ್ಬೇಕೂ ಅಂತ ನನಗ ಅನ್ನಿಸ್ತದ. ನಮಗೇ ಯಾಕೆ? ನಮ್ಮೂರಿಗೇ ಹಿರೇ ಮನುಷ್ಯ ನೀನು. ಸರ್ವಾನುಮತದಿಂದ ನೀನು ಅಧ್ಯಕ್ಷ ಆಗ್ಬೇಕು. ಅಂದ್ರ ನಮಗ ಶೋಭಾ, ನಿನಗ ಗೌರವ, ಮ್ಯುನಸೀಪಾಲ್ಟೀಗೆ ಮರ್ಯಾದೆ.

ಆದ್ರ, ನೋಡು ಜಯರಾಯಾ! ನಂ ಪಾರ್ಟಿ ಒಳಗಿನ ಕೆಲವು ಜನಾ ಅದಕ್ಕ ತಯಾರ ಇಲ್ಲಾ. ನಾನೂ ಈ ಸಂಜೀ ತನಕಾ ಖಟಪಟಮಾಡಿದೆ ಸಾಧಿಸಲಿಲ್ಲಾ. ಇಂದು ನಮ್ಮೆಲ್ಲಾರ ಮಾನ ಉಳಿಯೋದಕ್ಕ ಒಂದs ಹಾದಿ. ಹೇಳೀ ಕೇಳಿ ಜಯರಾಯ ನಮ್ಮವಾ. ಅವನಿಗೇ ಹೇಳಬೇಕೂ ಅಂತ ಬಂದೀನಿ, ನೋಡು ಜಯರಾಯಾ! ಅಂತ ಹೇಳ್ತೀನಿ.

ಭೀಮಣ್ಣ:-(ತಿಳಿಯದೆ) ಏನ ಹೇಳೋದವಗ ?

ಹನ್ಮಂತಪ್ಪ:-(ಬೇಜಾರದಿಂದ) ಏನ ಬುದ್ಧಿಗೇಡಿಜನಾ ಇದ್ದೀರಿ ನೀವೂ, ಅಂತೀನಿ. ಏನ ಹೇಳೋದಂದ್ರ? ನೀ ನಿಂತ್ರ ಕೆಲವು ಮಂದಿ ವಿರುದ್ಧ ಹೋಟ ಕೊಡ್ತಾರ, ಅದು ಯಾರಿಗೂ ಶೋಭಾ ಅಲ್ಲ, ನೀ ನಿಂದರೇ ಬ್ಯಾಡಾ ಅಂತ ಹೇಳ್ತೀನಿ, ತಿಳೀತಿಲ್ಲೊ ?(ರಾಮಣ್ಣನು ಖೊಳ್ಳನೆ ನಗುವನು) ತಿಳಿದು ನಗ್ತೀಯೊ, ತಿಳಿಯದೆ ನಗ್ತೀಯೋ?

ಸೆಕ್ರೆಟರಿ:-ನಿನ್ನ ಮಾತು ಆ ಮುದುಕ ಕೇಳಲಿಲ್ಲಾ ಅಂದ್ರ ?

ಹನ್ಮಂತಪ್ಪ:-(ಸಿಟ್ಟಿನಿಂದ) ಕೇಳಲಿಲ್ಲ ಅಂದ್ರ ನನ್ದೂ ಹೋಟು ವಿರುದ್ಧ ಅಂತ ಹೇಳ್ತೀನಿ–

ಭೀಮಣ್ಣ:-ಹೇಳಿದರೂ ನಿಂತರ ?

ಹನ್ಮಂತಪ್ಪ:-ಒಂದು ಹೋಟೂ ಬೀಳದ್ಹಾಂಗ ಮಾಡಸ್ತೀನಿ.

ರಾಮಣ್ಣ:-ಆದರೂ ಆರಿಸಿ ಬಂದರ ?

ಹನ್ಮಂತಪ್ಪ:-ಇಲೆಕ್ಶನ್ ರದ್ದು ಮಾಡಸ್ತೀನಿ.

ಸೆಕ್ರೆಟರಿ:-ಅಂದರೂ...

ಹನ್ಮಂತಪ್ಪ:-(ಒಮ್ಮೆಲೆ ಕನಲಿ) ಮ್ಯುನಸಿಪಾಲ್ಟಿ ಸಸ್ಪೆಂಡ ಮಾಡಸ್ತೀನಿ! ಈ ಊರಾಗ ಅವನಿಗೊಂದು ತುತ್ತು ರೊಟ್ಟಿ ಸಿಗದ್ಹಾಂಗ ಮಾಡತೀನಿ—

ಶೀನಪ್ಪ:-(ನಡುವೆಯೆ, ಸಂತಯಿಸುವವನಂತೆ) ಹನ್ಮಂತಪ್ಪಾ, ಇರಲಿ ಬಿಡು. ಶಾಂತ ಆಗು, ಸುಮ್ಮನೇ ಯಾಕ ತ್ರಾಸ ಮಾಡಿಕೋತಿ? ಅಂಥಾ ಪ್ರಸಂಗವೇ ಬರೋದಿಲ್ಲ.

ರಾಮಣ್ಣ:-(ಸಮಾಧಾನದಿಂದ) ಶೀನಪ್ಪಾ, ನಾ ಯಾಕ ಒದರಾಡ ತೀನಿ, ತಿಳೀತಿಲ್ಲೊ? ಹಾದಿಗೆ ಹೋಗೊ ದೆವ್ವನ್ನ ಮನೀ ವಳಗೆ ಹೊಗಿಸಿ ಕೊಂಡ್ಹಾಂಗ ಆಗೇದ. ಅಲ್ಲಾ, ನೀ ಆದರೂ ನೋಡತೀಯೊ ಇಲ್ಲೊ? ಮ್ಯುನಸಿಪಾಲ್ಟಿ ಮೆಂಬರು ತಂ ಓಣಿಕಸ ಬಳೀಬೇಕೂ ಅಂತಾನ! ಮೆಂಬರ ಜನಕ್ಕ ಕೂಡಲಿಕ್ಕೆ ಒಂದು ಹಾಲ ಇಲ್ಲಾ ಕಟ್ಟಿಸೋಣು ಅಂದ್ರ, ಮೊದಲ ಸಾಲಿ ಬಿಲ್ಡಿಂಗ ಕಟ್ಟಿಸೋಣು ಅಂತಾನ. ದಿನಕ್ಕ ದಿನಾ ದೇಖರೇಖೀ ಮಾಡಲಿಕ್ಕೆ ಅಧ್ಯಕ್ಷಗೊಂದು, ಚೀಫ ಆಫೀಸರಗೊಂದು ಮೋಟರ ಬೇಕೂ ಅಂದ್ರ, ಅದರ ಬದ್ಲಿ ನೀರ ತಂದು ರಸ್ತೆಕ್ಕ ಹೋಡೀಲಿಕ್ಕೆ ಒಂದು ಮೋಟರ ಸಾಕು ಅಂತಾನ! ಕೇಳಿದಿಯೊ ಇಲ್ಲೊ, ನೀನೇ, ಶೀನಪ್ಪಾ, ಮಾತಿಗೆ ಒಂದು ಅಡ್ಡ ಮಾತು, ಮತ್ತು ಎಲ್ಯಾದರೊ ಗಾಂಧಿಯವರ ಹೆಸರ ಹೇಳ್ತಾನ, ಜನ ಚಪ್ಪಾಳೆ ತಟ್ಟತದ. ಇವನ್ನ ಹಾಂಗೇ ಸಡಿಲ ಬಿಟ್ಟರ ನಾಲ್ಕ ದಿನ್ನಾಗ ತಲೆ ಎತ್ತಿ ತಿರುಗಾಡಲಾರದ್ಹಾಂಗ ಆದೀತು ನಮಗ ಊರಾಗ! ಮತ್ತ ಇವನನ್ನ ಮುಂದ ತಂದವರು ಯಾರು? ನಮ್ಮ ಹನ್ಮಂತಪ್ಪ, ಅಲ್ಲ? ಸ್ವಾತಂತ್ರ್ಯಕ್ಕಾಗಿ ಇದ್ದಬಿದ್ದ ಎಲ್ಲಾ ಜೇಲದೊಳಗ ಖಡೀವಡೆದು ಕಷ್ಟಪಟ್ಟ ಹನ್ಮಂತಪ್ಪ ಎಲ್ಲಿ? ಬಿಳೀ ತೊಟ್ಟರ ಡೌಲು ಅನ್ನೂದಕ್ಕ ಖಾದೀ ತೊಟ್ಟ ರೊಕ್ಕಾ ಗಳಿಸಿದ ಈ ಜಯರ ಎಲ್ಲಿ? ಯಾಕ ನಮ್ಮ ಹೊಟ್ಯಾಗ ಉರಿ ಬೀಳಬಾರ್ದು?

ಸೆಕ್ರೆಟರಿ:-ರಾಮಣ್ಣಾ ಎಲ್ಲಾ ಬಿಚ್ಚಿ ಹೇಳಿದ್ದಕ್ಕ ನನಗೂ ಮನಸು ಹಗರಾಯ್ತು. ನಾವ್ಯಾಕ ಬಡಕೋತೇವಿ? ನಮಗೇನು ಬೇಕಾಗೇದ ಶೀನಪ್ಪ? ಹತ್ತು ವರ್ಷ ಆಯ್ತು, ನೀನೇ ನೋಡೀದಿ, ಎಲ್ಲಿ ಹನ್ಮಂತಪ್ಪ ಅಲ್ಲಿ ಹಿಂದೆ ನಾವು ಇದ್ದೇ ಇದ್ದೇವೆ. ಈಗ ಸ್ವಾತಂತ್ರ್ಯ ಸಿಕ್ಕಿತು. ಇನ್ನು ನಮ್ಮ ಹನ್ಮಂತಪ್ಪ ಇನ್ನಿಷ್ಟು ಮುಂದ ಹೋಗ್ಬೇಕು ಅಂತ ಅನ್ನಿಸ್ತದ ನಮಗ. ಅನ್ನಿಸ್ತದೋ ಇಲ್ಲೊ ಹೇಳು, ಶೀನಪ್ಪಾ? (ಶೀನಪ್ಪನು ಮೌನ ದಿಂದ ತಲೆ ತೂಗುವನು.)

ಭೀಮಣ್ಣ:-ಹನ್ಮಂತಪ್ಪಾ, ಇದ್ಮಾತಂದ್ರ ಇಷ್ಟ ನೋಡು. ನೀ ಪ್ರೆಸಿ ಡೆಂಟ ಆಗಬೇಕು,- ರಾಮಣ್ಣ ಸ್ಕೂಲ ಬೋರ್ಡ ಚೇರಮನ್ ಆಗಬೇಕು—

ಸೆಕ್ರೆಟರಿ:-(ಸಮಾಧಾನದಿಂದ) ಹಾಂ! ಅಂದ್ರ ನಾವು ದುಡಿದದ್ದಕ್ಕ ನಂ ಮುಂದಿಗೆ ಮರ್ಯಾದೆ ಮುಟ್ಟಿತು, ಅಂತೀವಿ—

ರಾಮಣ್ಣ:-ನನಗೇನೂ ಬ್ಯಾಡ. ನಾ ಹೇಳೋದಾದ್ರ, ಭೀಮಣ್ಣ ಉಪಾಧ್ಯಕ್ಷ ಆಗಲಿ, ನಂ ಸೆಕ್ರೆಟರಿ ಸ್ಟ್ಯಾಂಡಿಂಗ ಕಮೀಟಿ ಚೇರಮನ್ ಆಗಲಿ, ಪ್ರೆಸಿಡೆಂಟ...ಪ್ರೆಸಿಡೆಂಟ ಹನ್ಮಂತಪ್ಪನೇ ಇರಲಿ.

ಸೆಕ್ರೆಟರಿ:–ನನ್ನ ಏನ್ಮಾಡ್ತಿ ? ನನಗ ಇಲ್ಲಿ ಬೇಕಾದಷ್ಟು ಕೆಲಸ ಅದ. ಇನ್ನೊಬ್ಬರು ಬೇಕೇ ಅಂತ ಹಟ ಇದ್ರ, ಶೀನಪ್ಪ ಸ್ಟ್ಯಾಂಡಿಂಗ ಕಮೀಟಿ ಚೇರಮನ್ ಅಗಲಿ.

ಶೀನಪ್ಪ:-ಅಢೇನಿಲ್ಲ. ಮೊದಲ ಹೇಳಿದ್ಹಾಂಗೇ ಇರಲಿ—

ಸೆಕ್ರೆಟರಿ:-ಅಂದ್ರ ?

ಶೀನಪ್ಪ:-ಹನ್ಮಂತಪ್ಪ ಅಧ್ಯಕ್ಷ–

ರಾಮಣ್ಣ:-ನೀನು ಸ್ಟ್ಯಾಂಡಿಂಗ ಕಮೀಟಿ ಚೇರಮನ್–

ಸೆಕ್ರೆಟರಿ:-ನೋಡಿರಿ, ನೆಟ್ಟಗ ವಿಚಾರ ಮಾಡಿರಿ---

ಭೀಮಣ್ಣ:-ಇರಲಿ ಬಿಡೊ ! ರಾಮಣ್ಣ ಸ್ಕೂಲ ಬೋರ್ಡ ಚೇರಮನ್—

ಸೆಕ್ರೆಟರಿ:-(ರಾಮಣ್ಣನಿಗೆ) ಮತ್ತ ಭೀಮಣ್ಣ ಉಪಾಧ್ಯಕ್ಷ ಅಂತ ಹೇಳಿದಿಯಲ್ಲ ?

ರಾಮಣ್ಣ:-(ತಲೆದೂಗುತ್ತ) ನೀ ಇದನ್ನ ಬರೆದುಕೊಂಡೇ ಬಿಡು ಕಮೀಟಿ ವಳ್ಗ ಹೀಂಗ ಠರಾವೇ ಆಯ್ತು ಅಂತ.

ಸೆಕ್ರೆಟರಿ:-(ಬರೆದುಕೊಂಡು) ಮತ್ತ ನಮ್ಮ ಅಧ್ಯಕ್ಷರು ಜಯರಾಯರ ಕಡೆ ಮಾತು ಕತೀಗೆ ಹೋಗತಾರ ಅಂತ—

ಹನ್ಮಂತಪ್ಪ:-ಅದು ಖಾಸಗಿ, ಅದೂ ಸಭಾದ ಠರಾವು ಅಲ್ಲ.

ಭೀಮಣ್ಣ:-ಅಂದ್ರ ಮುಗೀತಮುದಲ್ಲೋ ? ಅಂಗ್ಡಿ ಮುಚ್ಚೋ ಹೊತ್ತಾಯ್ತು, ಇನ್ನಾ ತೆರೀಲಿಕ್ಕೆ ಠಿಕಾಣ ಇಲ್ಲ. ನಾ ಹೋಗ್ತೀನಿ (ಏಳುವನು).

ರಾಮಣ್ಣ:-ನಾನೂ ಬಂದೆ, ಭೀಮಣ್ಣಾ. (ಏಳುವನು)

ಸೆಕ್ರೆಟರಿ:-(ಹನ್ಮಂತಪ್ಪನಿಗೆ) ನಾಳೆ ಮುಂಜಾನೆ ನಮ್ಮ ಪಾರ್ಟಿ ಮೆಂಬರರ ಮೀಟಿಂಗ ಕರೀತೇನಿ. ಇಲ್ಲಿಯೇ ಕೂಡೋಣ. (ಹನ್ಮಂತಪ್ಪನು ತಲೆದೂಗುವನು. ರಾಮಣ್ಣ–ಭೀಮಣ್ಣ ಹೊರಟದ್ದನ್ನು ನೋಡಿ) ಭೀಮಣ್ಣಾ, ನಾನೂ ನಿಮ್ಮ ಅಂಗ್ಡೀಗೇ ಬರ್ತೇನಿ, ನೋಟೀಸ ತಿರಗಿಸ ಬೇಕಾಗೇದ.

[ಎನ್ನುತ್ತ ಆ ಇಬ್ಬರೊಡನೆ ಹೊರಟು ಹೋಗುವನು.]

[ಒಂದು ನಿಮಿಷ ಹನ್ಮಂತಪ್ಪನೂ ಶೀನಪ್ಪನೂ ಅವರು ಹೋದುದನ್ನೇ ನೋಡುತ್ತ ಕೂತ್ರುವರು. ಆ ಮೇಲೆ ಒಬ್ಬರನ್ನೊಬ್ಬರು ನೋಡುವರು. ಕೊನೆಗೆ "ಹುಂ" ಎಂದು ಸಮಾಧಾನದಿಂದ ಉಸುರ್ಗರೆದು ಹಾಯಾಗಿ ಕುಳಿತು ಕೊಳ್ಳುವರು. ಒಂದು ನಿಮಿಷದ ತರುವಾಯ—]

ಶೀನಪ್ಪ:-(ಒಳಗಿನ ಮಾತು ತಡೆಯುದಂತಾಗಿ) ನೋ ೯ ಡಿ ದಿ ಲ್ಲೋ , ಹನ್ಮಂತಪ್ಪಾ, ಹ್ಯಾಂಗ ನನ್ನ ಹೊರಗಿಟ್ಟರು ? ಮೂರೂ ಮಂದಿ ಕೂಡಿ ?

ಹನ್ಮಂತಪ್ಪ:-(ಕೈಸನ್ನೆಯಿಂದ ಅವನಿಗೆ ತಡೆಯಲು ಸೂಚಿಸಿ, ಕಳ್ಳದನಿಯಲ್ಲಿ) ಹೋದರೊ ಇಲ್ಲೊ, ನೋಡಿಕೊಂಡು ಬಾ. (ಶೀನಪ್ಪನು ಬಾಗಿಲವರೆಗೆ ಹೋಗಿ ಹೊರಗೆ ಎರಡೂ ಕಡೆ ಹಣಿಕಿಕ್ಕಿ ನೋಡಿ, ತಿರುಗಿ ಬಂದು ತಲೆದೂಗುತ್ತಲೆ"ಹೋದರೆಂದು"ತಿಳಿಸಲು) ಹಂ-ಇನ್ನು ಮಾತಾಡೋಣು ಬಾ.

ಶೀನಪ್ಪ:-(ಅವನಿಗೆ ತುಸು ಹತ್ತಿರ ಕುಳಿತು) ಅಲ್ಲ, ನನ್ನ ಹ್ಯಾಂಗ ಹೊರಗಿಟ್ಟರು ಮೂರೂ ಮಂದಿ ಠಕ್ಕರು, ನೋಡಿದಿಯೋ ಇಲ್ಲೋ, ಅಂದೆ---

ಹನ್ಮಂತಪ್ಪ:-(ಮುಗುಳ್ನಗೆಯಿಂದ) ಹೊರಗ-ಒಳಗ! ಅವರ ಕೈಯ್ಯಾಗ ಏನದ ಅಂತ ನೀನು ಅದಕ್ಕ ಮಹತ್ವ ಕೊಡುವಿ ?

ಶೀನಪ್ಪ:-(ತುಸು ಕಿಚ್ಚಿನಿಂದ) ಅದಕೇ ಮತ್ತ "ಇದು ಠರಾವು ಅಂತ ಬರಕೋ" ಅಂತ ಹೇಳಿದನಲ್ಲಪಾ, ರಾಮಣ್ಣ ?

ಹನ್ಮಂತಪ್ಪ:-ಎಲೆ ನಿನ ! ಎಂದೂ ಮಾಡಿದ ಠರಾವನ್ನ ಮೂಲೆ

ಗೊತ್ತಿಯೇ ಇಲ್ಲ; ಅನ್ನೋ ಹಾಂಗ ಮಾತಾಡ್ತೀಯಲ್ಲೊ, ಶೀನಪ್ಪಾ! ಠರಾವ ಮಾಡೋದಕೇನು? ನಾಲ್ಕು ಜನಾ ಕೂತು ಕೈ ಎತ್ತಿದರ ಠರಾವಾಯ್ತು. ಆದರೆ ಅದನ್ನ ನಡಿಸೋವವರು ಯಾರು? ಆ ಅಧಿಕಾರ ಯಾರಿಗೆ? ಅಧ್ಯಕ್ಷನಿಗೆ!

ಶೀನಪ್ಪ:-(ತುಸು ಆಶೆ ಹುಟ್ಟಿದಂತಾಗಿ) ಅಂದ್ರ, ನೀ ಬ್ಯಾರೆ ವಿಚಾರ ಹಾಕೀದಿ ಅನ್ನು.

ಹನ್ಮಂತಪ್ಪ:-(ನಕ್ಕು) ಅಲ್ಲ. ಈ ಹುಚ್ಚುಗೊಟ್ಟಿಗಳಿಗೆ ಜಯರಾಯನ ಅಂಜಿಕಿ ಅದ ಅನ್ನೋದಕ್ಕ ಯಾರಿಗೆ ನಗೆ ಬರಲಿಕ್ಕಿಲ್ಲ? ಅಲ್ಲ, ಜಯರಾಯ ಯಾರು? ತನ್ನಷ್ಟಕ್ಕ ತಾ ಮನೀ ಹಿಡಿದು ಬಂದವರ್ನ ಮಾತಾಡಿ ಕಳುಹಿಸುತ್ತಿದ್ದ. ಅವನ ಹೆಸರು ಯಾರಿಗಾದ್ರೂ ಗೊತ್ತಿತ್ತ? (ತಿರಸ್ಕಾರವನ್ನು ಸೂಚಿಸುತ್ತ ಶೀನಪ್ಪನು ತಲೆ ಅಲ್ಲಾಡಿಸುವನು.) ಏನೋ ಒಂದು ದಿನ ನಾನಾಗಿಯೆ ಹೋದೆ, ಸಭಾಕ್ಕ ತಂದೆ, ಮಾತಾಡಿಸಿದೆ, ಪರಿಚಯ ಮಾಡಿಕೊಟ್ಟೆ, ನಾಲ್ಕ ಮಂದಿಗೆ ಅವನ ಹೆಸರು ಗೊತ್ತಾಯ್ತು. ಹೌದಂತೀಯೊ ಇಲ್ಲೊ? ನಾ 'ಬಾ' ಅಂದಾಗ ಬಂದವ ನಾ 'ಹೋಗು' ಅಂದಾಗ ಹೋಗ್ತಾನೊ ಇಲ್ಲೊ?

ಶೀನಪ್ಪ:-ಹೋಗಬೇಕೂ---

ಹನ್ಮಂತಪ್ಪ:-ನಿನಗೂ ಸಂಶಯನ? ಶೀನಪ್ಪಾ? ಅಲ್ಲ, ನೀನೇ ನೋಡ್ತಿ, ಇಂದಿಗೆ ಮೂರು ತಿಂಗಳಾಯ್ತು, ಈ ಮುದುಕನ ಹಣೆ ಬರಿಹಕ್ಕ ನಾಲ್ಕು ಜನಕ ಕೂಡಿಸಿ ಪಾರ್ಟಿ ಕಟ್ಟೋದಾಗಿಲ್ಲ-

ಶೀನಪ್ಪ:-(ತಿರಸ್ಕಾರದ ದನಿಯಲ್ಲಿ) ಅದೇನು ಸುಮ್ಮನೆ ಆದೀತೇನು? ಆ ಯೋಗ್ಯತಾನೇ ಬ್ಯಾರೆ.

ಹನ್ಮಂತಪ್ಪ:-ಆದರೆ ನಂ ಜನಕ್ಕ ಅಷ್ಟೆಲ್ಲಿ ಬುದ್ಧಿ ಅದೆ? ಜಯರಾಯ ಲೆಕ್ಚರ ಕೊಡತಾನ, ಲೆಕ್ಚರಕ ಜನಾ ಬಹಳ ಬರತದ, ಅವನ ಹೆಸರಿಗೊಮ್ಮೆ ಚಪ್ಪಾಳೆ ಬೀಳ್ತಾವ ಅಂದ್ಮೂಡ್ಲೆ ಅವನೂ ಒಬ 'ಲೀಡರ್' ಅಂತ ತಿಳೀತಾವ ಈ ಮಳ್ಳಗಳು! ಶೀನಪ್ಪಾ, ಡೆಮಾಕ್ರಸಿ ಖುಬಿ ಅಂದ್ರ ಇದೇ ನೋಡು, ಚಪ್ಪಾಳೆ ಅಂದ್ರ ವ್ಹೋಟ ಅಲ್ಲ. ಚಪ್ಪಾಳೆ ಗಳಿಸೋ ಧಂದೆ

ಬ್ಯಾರೆನೇ, ಹೋಟ ಗಳಿಸೊ ಧಂದೆ ಬ್ಯಾರೆನೆ.

ಶೀನಪ್ಪ:-(ಮಾತು ಬದಲಾಯಿಸುವ ಹವಣಿಕೆಯಲ್ಲಿ) ಅಂದ್ರ, ಈಗ ನೀ ಹಂಚಿಕಿ ಹಾಕಿ ಇಟ್ಟೇದಿ ಅನ್ನು ಹನ್ಮಂತಪ್ಪಾ. (ಮೆಲ್ಲಗೆ) ಜಯರಾಯ ಪ್ರೆಸಿಡೆಂಟ ಆಗೋದಿಲ್ಲ ಹೌದಲ್ಲೊ?

ಹನ್ಮಂತಪ್ಪ:-ಶೀನಪ್ಪಾ, ಡೆಮಾಕ್ರಸೀದು ಇನ್ನೊ ಒಂದು ಮೋಜು ಹೇಳ್ತೇನಿ! ಪ್ರೆಸಿಡೆಂಟ ಅನ್ನೊ, ಪ್ರೆಸಿಡೆಂಟನ ಅಪ್ಪ ಅನ್ನೊ---ಯಾವನ ಕೈಯಾಗ ಗೊಂಬೆ ಕುಣಿಸೊ ಸೂತ್ರ ಇರ್ತದ ನೋಡು, ಅವನೇ ದೊಡ್ಡ ಮನುಷ್ಯ.

ಶೀನಪ್ಪ:-(ಸುಳ್ಳು ನಗೆಯಿಂದ) ಅದೇನು ಸುಳ್ಳಲ್ಲ-ಹೆ-ಹೆ- ಅದೇನು ಸುಳ್ಳಲ್ಲ-ಹೆ-ಹೆ-

ಹನ್ಮಂತಪ್ಪ:-ಆ ವಿಚಾರ ನನಗ ಬಿಟ್ಟು ಬಿಡು, ಶೀನಪ್ಪಾ. ಆದರೆ ಈ ಹೊತ್ತು ರಾತ್ರೋರಾತ್ರಿ ನೀ ಒಂದು ಕೆಲಸ ಮಾಡ್ಬೇಕು.

ಶೀನಪ್ಪ:-(ಉತ್ಸಾಹದಿಂದ) ಏನು ಹೇಳು, ಹನ್ಮಂತಪ್ಪ?

ಹನ್ಮಂತಪ್ಪ:-(ಮಗ್ಗುಲಿಗೆ ಬಿದ್ದ ಟೊಪ್ಪಿಗೆಯನ್ನುತಲೆಯ ಮೇಲಿಟ್ಟುಕೊಂಡು ಏಳುತ್ತ) ನಡೀ ಮನೆಯ ಕಡೆ ಹೋಗೂಣ, ಏನಾದ್ರೂ ಚಹಾ-ಫರಾಳಾ ತಗೊಳ್ಳೋಣ, ಅಲ್ಲಿಯೆ ಹೇಳ್ತೇನಿ ನಿನಗ.

ಶೀನಪ್ಪ:-(ಎದ್ದು) ಮತ್ತ ನಾಳಿನ ಕಮೀಟಿಗಳವ--

ಹನ್ಮಂತಪ್ಪ:-(ನಡುವೆಯೆ) ಪ್ರೆಸಿಡೆಂಟನ ಜಾಗಾಕ್ಕ ಶೀನಪ್ಪನ ಹೆಸರು!

ಶೀನಪ್ಪ:-(ಹೌಹಾರಿದಂತಾಗಿ) ಏನು? ಏನಂದೆ? ನೀನೂ ಚಾಷ್ಟೀ ಮಾಡ್ತೀಯಾ?

ಹನ್ಮಂತಪ್ಪ:(ಅವನ ಬೆನ್ನಿಗೆ ವಾತ್ಸಲ್ಯದಿಂದ ಗುದ್ದಿ) ಚಾಷ್ಟಿ ಅಲ್ಲೊ, ಮಳ್ಳ, ಖರೇನೇ ನಿನ್ನ ಹೆಸರು ಗೊತ್ತು ಮಾಡೋದು...ಅದಕೇ ನಡೀ ಮನೀ ಕಡೆಗೆ, ಎಲ್ಲಾ ಹೇಳ್ತೀನಿ ಅಂದೆ. (ಮುಂದಾಗಿ ಹೊರಡುವನು.)

ಶೀನಪ್ಪ:-(ಗೊಣಗುವ ಸೋಗಿನಿಂದ) ಹೊಸ ಪೇಚು ಕಾಣಸ್ತದ ಹಣ ಮಂತಪ್ಪನದು.

[ಇಬ್ಬರೂ ಹೊರಬೀಳುವಾಗ]

[ ತೆರೆ ]

## [ದೃಶ್ಯ-೨]

[ಹಿಂದಿನ ದೃಶ್ಯದ ತರುವಾಯ ಎರಡು ತಿಂಗಳುಗಳು ಕಳೆದಿವೆ; ಸರಿಯಾಗಿ ಹೇಳುವುದಾದರೆ, ಜನವರಿ ೨೦, ೧೯೪೮. ರಾತ್ರಿ ೮॥ ಗಂಟೆಯ ಸಮಯ. ಜಯರಾಯರ ಮನೆಯಲ್ಲಿಯ ಒಂದು ಪ್ರಶಸ್ತವಾದ ಕೋಣೆ. (ಪ್ರೇಕ್ಷಕರ) ಎದುರಿಗೆ ಕೋಣೆಯಿಂದ ಹೊರಗೆ ಹೋಗುವ ಬಾಗಿಲು. ಈ ಗೋಡೆಗೆ ನಡುವೆ ಬಾಗಿಲು, ಎರಡೂ ಬದಿಗೆ ಎರಡು ದೊಡ್ಡ ಕಿಡಕಿಗಳಿವೆ. ಅವುಗಳಿಂದ ಹೊರಗೆ ಬೇರೆ ಕೆಲವು ದೀಪಗಳು ದೂರದಲ್ಲಿ ಕಾಣುವವು ಬಲಬದಿಯ ಗೋಡೆಗೆ ಈ ಕೋಣೆಯಿಂದ ಮನೆಯ ಒಳಕ್ಕೆ ಹೋಗುವ ಬಾಗಿಲು. ಈ ಬಾಗಿಲಿಗೆ ಒಂದು ಪರದೆಯನ್ನು ಇಳಿಬಿಟ್ಟಿದೆ. ಎದುರಿನ ಬಾಗಿಲು ಮಾತ್ರ ತೆರೆದಿದೆ. ಈ ಬಾಗಿಲಿನ ಹೊರಗಿದ್ದ ಕಟಾಂಜನ, ಇಳಿಯುವ ಪಾವಟಿಗೆಗಳ ಸುಳಿವು ತುಸುಮಟ್ಟಿಗೆ ಕಾಣುತ್ತಿರಬೇಕು. (ಪ್ರೇಕ್ಷಕರ) ಎಡಬದಿಗಿದ್ದ ಗೋಡೆಯ ಮಧ್ಯಕ್ಕೆ ಒಂದು ರೇಡಿಯೊ ಸೆಟ್ ಇದೆ. ಅದರ ಎರಡೂ ಬದಿಗೆ ಎರಡು ಪ್ರಶಸ್ತವಾದ ಖುರ್ಚಿಗಳು ಎದುರು ಗೋಡೆಯ ಒಂದು ಕಿಟಕಿಗುಂಟ ಒಂದು ಸೋಫಾ ಮನೆಯೊಳಗಿಂದ ಬಂದರೆ ಬಲಕ್ಕೆ ದೊಡ್ಡ ಮೇಜು, ಅದರ ಎರಡೂ ಬದಿಗೆ ಖುರ್ಚಿಗಳು, ಮೇಲೆ ಪತ್ರಿಕೆಗಳು, ಫೈಲುಗಳು, ಬರೆಯುವ ಸಲಕರಣೆಗಳು; ಎಡಬದಿಗೆ ಸಣ್ಣಮೇಜು, ಒಂದು ಸಾದಾ ಕುರ್ಚಿ.

ತೆರೆ ಮೇಲಕ್ಕೇಳುವಾಗ ರೇಡಿಯೋದಿಂದ ಸಂಗೀತ ಕೇಳಬರುತ್ತಿದೆ. ಸಣ್ಣ ಮೇಜಿನ ಹಿಂದೆ ಗೋಡೆಗಿಟ್ಟ ಖುರ್ಚಿಯಮೇಲೆ ಗೋವಿಂದಪ್ಪನು ಕೆಲವು ಕಾಗದಗಳನ್ನು ನೋಡುತ್ತ ಕುಳಿತಿದ್ದಾನೆ. ರೇಡಿಯೋದ ಎಡಗಡೆಯ ಮೂಲೆಗೆ ಶಾಮನು ಕುಳಿತಿದ್ದರೂ ಕೂಡಲೆ ಅದು ಯಾರ ಲಕ್ಷ್ಯಕ್ಕೂ ಬರುವಂತಿಲ್ಲ. ಒಂದೆರಡು ನಿಮಿಷಗಳಲ್ಲಿ—]

ರಂಗಮ್ಮ:-(ಮನೆಯೊಳಗಿಂದ ಬಂದು) ಅಯ್ಯ, ಯಾವಾಗ ಎಂಟು ಹೊಡೆದು ಹೋಯ್ತು, ಇನ್ನೂ ಬಂದಿಲ್ಲ ಇವರು?

ಗೋವಿಂದಪ್ಪ:-(ನಿದ್ದೆಯಿಂದ ಎಚ್ಚತ್ತವನಂತೆ ಸಂದರ್ಭ ತಿಳಿಯದೆ) ಆಂ?

[ಇಷ್ಟರಲ್ಲಿ ರೇಡಿಯೋದ ಸ್ವರ ಕೆಳಗಿಳಿಯಲು ಇವರಿಬ್ಬರ ಲಕ್ಷ್ಯವೂ ಆ ಕಡೆಗೆ ಹೊರಳಿ ಇಬ್ಬರೂ ಶಾಮುನನ್ನು ನೋಡುವರು.]

ರಂಗಮ್ಮ:-(ಆಶ್ಚರ್ಯದಿಂದ) ನೀ ಮನೀವಳಗೇ ಇದ್ದೀಯೋನೋ, ಶಾಮಾ?

ಶಾಮು:-(ಬೇಜಾರದ ದನಿಯಲ್ಲಿ) ಹುಂ---(ಆಕಳಿಸಿ ಮೈ ಮುರಿದುಕೊಳ್ಳುವನು.)

ರಂಗಮ್ಮ:-ರಾತ್ರಿ ಎಷ್ಟೊತ್ತಾಯಿತು, ಇವರಿನ್ನೂ ಬರಲೇ ಇಲ್ಲ—

ಗೋವಿಂದಪ್ಪ:-ಈ ಹೊತ್ತು ಮಾರ್ಕೇಟದ ಸಲುವಾಗಿ ಮೀಟಿಂಗ ಅದ, ರಂಗಮ್ಮನೋರೆ.

ರಂಗಮ್ಮ:-ಏನ ಮಾರ್ಕೆಟ್ಟೋ ಏನೋ! ಈ ಹಾಳ ಮ್ಯುನಸಿಪಾಲ್ಟಿ ಇಲೆಕ್ಶನ ದಶಿಂದ ನಾಲ್ಕು ಮಂದಿ ಜೋಡಿ ಮಾರಿಕೆಟ್ಟದ್ದು ಮಾತ್ರ ಖರೆ.

ಗೋವಿಂದಪ್ಪ:-(ಹಿರಿತನದಿಂದ) ಇಲೆಕ್ಶನದ್ದಲ್ಲ ಅದು. ರಂಗಮ್ಮ, ರಾಯರು ಪ್ರೆಸಿಡೆಂಟ ಆಗಿ ಆರಿಸಿ ಬಂದರಲ್ಲಾ, ಅಂದಿನಿಂದ ಸುರು ಆಯ್ತು ನೀವು ಹೇಳೋದು.

ರಂಗಮ್ಮ:-ಎಂದಿನಿಂದೇ ಇರವಲ್ಡ್ಯಾಕ, ಆದದ್ದೇನೊ ಸುಳ್ಳಲ್ಲ? ಹತ್ತಿಪ್ಪತ್ತು ವರ್ಷ ತಣ್ಣಗ ಮನೀವಳಗ ಕೂತವರಿಗೆ ಈಗ ಯಾಕ ದುರ್ಬುದ್ಧಿ ಬಂತೋ!

ಗೋವಿಂದಪ್ಪ:-(ಹೆಮ್ಮೆಯ ದನಿಯಲ್ಲಿ) ಏನು, ರಂಗಮ್ಮಾ ನೀವೇ ಹೀಂಗ ಮಾತಾಡಿದರ? ರಾಯರು ಮ್ಯುನಸಿಪಾಲಟೀಗೆ ಆರಿಸಿ ಬಂದರು ಅಂತ ನಮ್ಮೂರು ರಾತ್ರಿ ದೀಪ ಆವರೂ ಕಂಡಿತು. ಈಗ ಇನ್ನು ಈ ಹೊಸದಾಗಿ ಮಾರ್ಕೆಟದೊಂದು ಕಟ್ಟಡ ಕಟ್ಟಿಸಿದನಂತರ ಎಲ್ಲಾರೂ ಹಾಡಿ ಹರಸ್ತಾರ ರಾಯರ್ನ.

ರಂಗಮ್ಮ:-ಎಲ್ಲಾರ್ನೂ ತೊಗೊಂಡು ಏನ್ಮಾಡೂದು, ಗೋವಿಂದಪ್ಪ? ನಂ ಸಂಬಂಧ ಯಾರ ಜೋಡಿ ಅವರೇ ನಮ್ಮನ್ನ ಕಂಡು ದೂರ ಹಾಯ್ದರ

ಏನು ಸುಖ? ಈಗ ನೋಡಿರಿ. ಇವರು ಪ್ರೆಸಿಡೆಂಟ ಆದರು ತನ್ನನ್ನು ಸೋಲಿಸಿ ಅಂತ ಆ ಶೀನಪ್ಪಗ ಸಿಟ್ಟು. ಅದೂ ಹೋಗಲಿ, ದಿನಾಲು ಮನೀಗೆ ಬಂದು ನಕ್ಕು ಮಾತಾಡಿ ಹೋಗೋ ಹನ್ಮಂತಪ್ಪ ಸಹಿತ ಇವರಿಗೆ ವಿರುದ್ಧ ಅಂತ—

ಶಾಮು:-ಆ ಹನ್ಮಂತಪ್ಪಗೂ ಪ್ರೆಸಿಡೆಂಟ ಆಗ್ಬೇಕಾಗಿತ್ತು.

ರಂಗಮ್ಮ:-ಅದಕೇ ಹೇಳಿದೆನಲ್ಲ ಇವರು ಆ ಗದ್ದಲದಾಗ ಬೀಳ್ಬಾರ್ದಿತ್ತು. ಅಂತ...ಏ, ಶಾಮಾ, ಒಂದಿಷ್ಟು ಸೈಕಲ್ ತಗೊಂಡು ಹೋಗಿ ನೋಡಿಬರ್ತೀಏನು? ಇವರಿಗೆ ತಡಾ ಆಯ್ತು ಅಂದ್ರ ನನಗ ಒಳಗೆ ಚೈನೇ ಬೀಳೂದಿಲ್ಲ, ಕೆಲಸ ಸಾಗೋದಿಲ್ಲ. ನೋಡಿ ಬಾರಪ್ಪ ಒಂದಿಷ್ಟು. (ಎಂದು ಮತ್ತೆ ಒಳಗೆ ಹೋಗುವಳು.)

ಗೋವಿಂದಪ್ಪ:-(ಅವಳು ಹೋದಳೆಂಬುದನ್ನು ನೋಡಿಕೊಂಡು) ಕೂತ ಕೂತಲ್ಲೆ ಏಲ್ಲಾ ಗೊತ್ತಿರತದ ರಂಗಮ್ಮನೋರಿಗೆ!

(ಕಾಗದಗಳನ್ನು ಸಾವರಿಸುತ್ತಿರುವನು.)

ಶಾಮು:-ಹುಂ_(ಎನ್ನುತ್ತ ಎದ್ದು ಸೋಫಾದ ಕಡೆಗೆ ನಡೆಯುವನು.)

ಗೋವಿಂದಪ್ಪ:-(ಚಕಿತನಂತೆ ಅವನನ್ನು ನೋಡುತ್ತ) ನಿಮಗ ರೇಡಿಯೋ ಹಚ್ಚಬೇಕಾಗಿತ್ತೇನು?

ಶಾಮು:-(ಒಮ್ಮೆಲೆ ತಿರುಗಿ, ಗಾಬರಿ ದನಿಯಲ್ಲಿ) ರೇಡಿಯೊ ಹಚ್ಚೋದು?

ಗೋವಿಂದಪ್ಪ:-(ತಿಳಿಯದೆ) ಅಲ್ಲ. ನನ್ನ ಶಿಂದ ಹಚ್ಚೋದನ್ನ ಬಿಟರೇನೂ ಅಂತ? (ಏಳುತ್ತ) ನನ್ದು ಕೆಲಸ ಮುಗೀತು. ನಾನೇ ನೋಡ್ತೀನಿ ರಾಯ್ರು ಇನ್ನೂ ಯಾಕ ಬರಲಿಲ್ಲಾ ಅಂತ.

ಶಾಮು:-(ಸೋಫಾದ ಮೇಲೆ ಕುಳಿತು ಕೊಂಡು) ಗೋವಿಂದಪ್ಪ, ಈವತ್ತು ತಾರೀಖು ಯಾವದು?

ಗೋವಿಂದಪ್ಪ:-ಈ ಹೊತ್ತು ೨೦. ಅಲ್ಲ ೨೧-ಅಲ್ಲ. ತಡೀರಿ (ಇನ್ನೊಂದು ಮೇಜಿನ ಮೇಲಿಂದ ಪತ್ರಿಕೆಯೊಂದನ್ನೆತ್ತಿ ನೋಡಿ) ಜನವರಿ ೨೦, ೧೯೪೮-ಹಂ-ಹೌದು ೨೦, ನನ್ಗ ಅನಿಸಿತ್ತು—

ಶಾಮು:-(ತನ್ನಷ್ಟಕ್ಕೆ) ಐದುತಿಂಗಳಾಯ್ತು.—

ಗೋವಿಂದಪ್ಪ:-(ಸಂದರ್ಭ ತಿಳಿಯದೆ) "ಐದು ತಿಂಗಳು" ಏನಂದ್ರಿ, ಶಾಮುರಾಯರ?

ಶಾಮು:-(ಹುಸಿ ನಗೆಯಿಂದ) ಏನಿಲ್ಲ—ಸ್ವಾತಂತ್ರ್ಯದ ಐದನೇ ತಿಂಗಳು, ಇಷ್ಟ-ರೊಳಗೆ ಗರ್ಭಪಾತ ಆಯಿತಲ್ಲ—ಅಂತ.

ಗೋವಿಂದಪ್ಪ:-(ಪೆಚ್ಚುಕಳೆಯಿಂದ) ಗರ್ಭಪಾತ!

ಶಾಮು:-(ಮಾತಿಲ್ಲದೆ ತಿರುಗುವನು.)

ಗೋವಿಂದಪ್ಪ:-(ಹೆಚ್ಚು ಗಾಬರಿಯಿಂದ, ಆದ್ದರಿಂದ ಉಸಿರ-ದನಿಯಲ್ಲಿ) ಗ-ರ್ಭ-ಪಾ-ತ?

ಶಾಮು:-(ಮಾತಿಲ್ಲದೆ, ಆದರೆ ಮುಂಚಿಗಿಂತ ಹೆಚ್ಚು ರಭಸದಿಂದ ತಲೆ ದೂಗುವನು.)

ಗೋವಿಂದಪ್ಪ:-ಶಾಮುರಾಯರೆ—

(ಹೊರಗಿನಿಂದ "ಇದ್ದಾರೇನು"? ಎಂದು ವೆಂಕಣ್ಣನ ದನಿ)

ಗೋವಿಂದಪ್ಪ:-(ಅವಸರವಸರವಾಗಿ, ಕಳ್ಳದನಿಯಲ್ಲಿ) ಶಾಮುರಾಯರ ಸದ್ಯಕ್ಕೆ ನಿಮ್ಮಷ್ಟಕ್ಕೆ ಇಟ್ಟುಕೊಳ್ಳಿರಿ ಈ ಸುದ್ದೀನ್ನ—ರಾಯರಿಗೆ ತಿಳೀತಂದ್ರ—

(ಪಾವಟಿಗೆಗಳನ್ನು ಹತ್ತುವಾಗ ನೋಡಿ "ಇದ್ದೀಯೇನಪಾ?" ಎನ್ನುತ್ತ ವೆಂಕಣ್ಣನು ಬರುವನು.)

ಗೋವಿಂದಪ್ಪ:-(ಲಗುಬಗೆಯಿಂದ) ಇದ್ದಾರ ಬರ್ರಿ, ಅಂದ್ರ-ರಾಯ್ರು ಇನ್ನೂ ಬಂದಿಲ್ಲ, ಯಾಕ ತಡ ಆಯ್ತೂ ಅಂತ ನೋಡ್ಲಿಕ್ಕ ಹೊರಟೇನಿ ನಾನು—(ಶಾಮುನಿಗೆ) ನಾ ಇಲ್ಲಿತನಕ ಬಂದು ರಾಯರ್ನ ಮುಟ್ಟಿಸಿಯೆ ಹೋಗ್ತೀನಿ (ಎನ್ನುತ್ತ ಹೊರಗೆ ಹೋಗುವನು.)

ವೆಂಕಣ್ಣ:-(ರೇಡಿಯೋದ ಎಡಕುರ್ಚಿಯ ಹತ್ತಿರ ನಿಂತು.) ಕೇಳಿದಿ ಏನು ಸುದ್ದಿ?

ಶಾಮು:-ಕೇಳಿದೆ. ಅದನ್ನೆ ಗೋವಿಂದಪ್ಪಗೆ ಹೇಳಿದೆ, ಅವ ಗಾಬರಿ ಆದ—

ವೆಂಕಣ್ಣ:-ಗೋವಿಂದಪ್ಪಗ ಹೇಳಿದಿ?

ಶಾಮು:-ಅವನಿಗೆ ಹೇಳಿದೆ—ಸ್ವಾತಂತ್ರ್ಯದ್ದು ಐದೇ ತಿಂಗಳಲ್ಲಿ ಗರ್ಭಪಾತ ಆತೂ ಅಂತ—ಆದರೆ ಅವನಿಗೆ ಏನು ಅನ್ನಿಸಿತೋ?- ರಾಯರಮುಂದ ಹೇಳಬ್ಯಾಡರಿ, ಅಂದ.

ವೆಂಕಣ್ಣ:-ಅಂದ್ರ ಜಯರಾಯರಿಗೆ ಗೊತ್ತಿಲ್ಲೇನು?

ಶಾಮು:-ಗೊತ್ತಿರಲಿಕ್ಕಿಲ್ಲ—ಇದ್ರ ಎಲ್ಲಾ ಕೆಲಸ ಬಿಟ್ಟು ಬರತಿದ್ದರು.

ವೆಂಕಣ್ಣ:-(ಅದೇ ಖುರ್ಚಿಯಲ್ಲಿ ಕೂಡ್ರುತ್ತ) ಹುಂ...ಅಂತೂ ಒಂದರ ವ್ಯಾಲೊಂದು ಅನಾಹುತ ನಡೆದುವು ದೇಶದೊಳಗ.

ಶಾಮು:-ಮತ್ತೇನಾದರೂ ಹೆಚ್ಚಿನ ವಿವರ ಗೊತ್ತಾಗೆದೇನು?

ವೆಂಕಣ್ಣ:(ಲಕ್ಷ್ಯವಿಲ್ಲದವನಂತೆ, ಮೆಲ್ಲಗೆ ಎದುರಿನ ಮೇಜಿನ ಕಡೆಗೆ ಹೆಜ್ಜೆ ಇಡುತ್ತ) ವಿವರ? ಎಲ್ಲೀದು? ರೇಡಿಯೊದೊಳಗ ಹೇಳಿದಷ್ಟೆ-ಪ್ರಾರ್ಥನಾ ಸಭಾ ನಡೆದಾಗ ಯಾವನೊ ಒಬ್ಬ ಒಂದು ಬಾಂಬು ಬೀಸಿ ವಗೆದ-ಜನರು ಗಾಬರಿ ಆದರು—ಗಾಂಧೀಜಿಯವರೆ ಅವರ್ನೆಲ್ಲಾ ಶಾಂತ ಮಾಡಿದರು.—

ಶಾಮು:-ನಿನಗೇನನ್ನಿಸ್ತದ, ವೆಂಕಣ್ಣಾ?

ವೆಂಕಣ್ಣ:-(ಒಮ್ಮೆಲೆ ಮೇಜಿನ ಮುಂದಿನ ಕುರ್ಚಿಯ ಹತ್ತಿರ ತಿರುಗಿನಿಂತ.) ಏನಂವಿ? ಏನನ್ನಿಸ್ತದ? ಅನ್ನಿಸೋದೇನು? ಗಾಂಧೀಜಿಯವರು ಇರೋತನಕ ದೇಶದೊಳಗ ಶಾಂತಿ-ಸಮಾಧಾನ ಉಳೀತಾವ. ಇದನ್ನ ತಿಳಿಯದ ಮೂರ್ಖರು ನಂ ದೇಶದಾಗ ಇದ್ದಾರ ಅಂದ ಹಾಗಾಯ್ತು. (ಅದೇ ಕುರ್ಚಿಯಲ್ಲಿ ಕೊಡ್ರುವನು.)

ಶಾಮು:-ಉಹುಂ (ವೆಂಕಣ್ಣನು ಚಕಿತನಾಗಿ ತನ್ನನ್ನು ನೋಡಲು) ಅದಕ್ಕಿಂತ ದೊಡ್ಡ ಮೂರ್ಖತನ ಮತ್ತೊಂದಿದೆ ನಂ ದೇಶದೊಳಗ ಯಾವುದು—ಹೇಳಲಿಯಾ? ಗಾಂಧೀಜಿಯವರು ಒಂದು ಪಾರ್ಟಿಯವರು, ಕಾಂಗ್ರೆಸದೊಳಗ ಇದ್ದವರು ಅಂತ ತಿಳಿಯೋದು.

ವೆಂಕಣ್ಣ:-(ನಗುತ್ತ) ಗಾಂಧೀಜಿಯವರು ''ಕಾಂಗ್ರೆಸದೊಳಗ ಇದ್ದ.

ವರು'' ಅಂದ್ರ ? ಹಹ! ಹೌದು, ಹಾಗ ತಿಳಿಯೋದು ದೊಡ್ಡ ಮೂರ್ಖತನ ಯಾಕೇಂದ್ರ ಗಾಂಧಿಜಿ ಅಂದ್ರೇನೆ ಆ ಸಂಸ್ಥಾ ಅನ್ನೋವಾಗ—

ಶಾಮು:-(ನಡುವೆಯೆ) ಹಾಗ ತಿಳಿಯೋದಂತೂ ಶತಮೂರ್ಖತನ. (ಸೋಫಾದಿಂದ ಏಳುವನು)

ವೆಂಕಣ್ಣ:-(ಚಕಿತನಾಗಿ) ಏನಂದಿ ?

ಶಾಮು:-(ತನ್ನಷ್ಟಕ್ಕೆ) That's the tragedy of my father! (ವೆಂಕಣ್ಣನಿಗೆ) ನನ್ನ ತಂದೆಯವರೂ ನಿನ್ನ ಹಾಂಗೇ ತಿಳಿದಾರ—ಗಾಂಧೀಜಿ ಅಂದ್ರೆ ಕಾಂಗ್ರೆಸು ಅಂತ.—

ವೆಂಕಣ್ಣ:-(ನಡುವೆಯೆ) ಅಲ್ಲೊ ? ನೀ ಅಂತೀಯಾದ್ರೂ ಏನು ? ಗಾಂಧೀಜಿಯುವರು ನಿಂ ಸೊಶಾಲಿಸ್ಟ ಪಾರ್ಟಿ ಸೇರ್ಯಾರ ಅಂತೀಯೇನು ?

ಶಾಮು:-(ನಗುತ್ತ) ಹ-ಹ !

ವೆಂಕಣ್ಣ:-(ಸಿಡುಕಿನ ದನಿಯಲ್ಲಿ) ''ಹೆ-ಹೆ'' ಅಂತ ಹೇಕರಸತಿ ಏನು ? ಹೇಳಲ್ಲ ?

ಶಾಮು:-(ತಡೆದು-ಅವನ ಹತ್ತಿರ ಬರುತ್ತ) ಸಿಟ್ಟಿಗೇಳಬ್ಯಾಡೊ ! ''ಸೊಶಾಲಿಸ್ಟ'' ಅನ್ನೋದು ಇನ್ನೂ ಅಭ್ಯಾಸ ಮಂಡಲ – Study circle—ಅದಕ್ಕ ಪಾರ್ಟಿ ಅಂತ ನಾವ ಅನ್ನೋದಿಲ್ಲ.

ವೆಂಕಣ್ಣ:-ನಿನ್ನ ಪ್ರಚಾರ ಭಾಷಣ ಬ್ಯಾಡ ಈಗ ; ಗಾಂಧೀಜಿಯವರ ದೇನಂತೀ ?

ಶಾಮು:-ಗಾಂಧೀಜಿಯುವರು ಕಾಂಗ್ರೆಸ್ಸಿಗೆ ವಿರುದ್ಧ ಇದ್ದಾರ.

ವೆಂಕಣ್ಣ:–ಆಂ ?(ಒಮ್ಮೆಲೆ) ಏನಂದಿ ? ಹಹಹ ! ವಿರುದ್ಧ— ('ಹ ಹ' ಎಂದು ಗಟ್ಟಿಯಾಗಿ ನಗುವನು.)

ಶಾಮು:-(ಹಟದ ದನಿಯಲ್ಲಿ) ಗಾಂಧೀಜಿಯುವರು ಕಾಂಗ್ರೆಸ್ಸಿಗೂ ವಿರುದ್ಧ ಇದ್ದಾರ, ಯಾವ ಪಾರ್ಟಿಗೂ ವಿರುದ್ಧ ಇದ್ದಾರ-ಅಂತೀನಿ. ಅವರಿಗೆ ಬೇಕಾದವ್ರು ಬ್ಯಾರೆ, ಪಾರ್ಟಿಯುವರು ಮಾಡೋದೇ ಬ್ಯಾರೆ. ಇದನ್ನ

ತಿಳಿಯದ ಮೂರ್ಖರು ಪಾರ್ಟಿಯ ಮ್ಯಾಲಿನ ಸಿಟ್ಟಿಗೆ ಗಾಂಧೀಜಿ ಮ್ಯಾಲೆ ಬಾಂಬ ಒಗೀತಾರ (ವೆಂಕಣ್ಣ ಮಾತಾಡಬೇಕೆನ್ನಲು) ತಡೆ-ತಡೆ—ಇನ್ನು ಇದನ್ನ ತಿಳಿಯಲಾರದ ನಿನ್ನಂತಹರು, ನನ್ನ ತಂದೆಯಂತಹರು, ಗಾಂಧಿ ಭಕ್ತಿಯಿಂದ ಪಾರ್ಟಿವಳಗ ಉಳೀಬೇಕೂ ಅಂತಾರ. ಅಂತಹರಿಗೆ ಪಾರ್ಟೀನೇ ಕಡೆಗೆ ಅರ್ಧಚಂದ್ರ (ಕೈ ಮಾಡಿ ಸನ್ನೆಯಿಂದ ಅರ್ಧವನ್ನು ಮುಗಿಸುವನು.)

ವೆಂಕಣ್ಣ:-ಹುಂ-(ಅಣಕಿನ ದನಿಯಲ್ಲಿ) ಇದೇ ಏನು ನೀ ಹೇಳೋ tragedy ?

ಶಾಮು:-ಇದೇ. ಪಾರ್ಟಿ ಕಟ್ಟಿದವರಿಗೆ ಅಶೋಕ ಚಕ್ರ, ಗಾಂಧಿ ಬೆನ್ನು ಕಟ್ಟಿದವರಿಗೆ ಶೋಕ ಚಕ್ರ.

ವೆಂಕಣ್ಣ:- (ಎದ್ದು) ಒಟ್ಟು ನಿನ್ನ ಬುದ್ಧಿಗೇ ಚಕ್ರ ಅನ್ನು. (ಶಾಮುನು ಕೈಯಿಂದ "ಬೇಕಾದದ್ದನ್ನು ಅಂದುಕೊ" ಎನ್ನುವಂತೆ ಸೂಚಿಸುತ್ತ ರೇಡಿಯೋದ ಬಲಬದಿಯ ಕುರ್ಚಿಯಲ್ಲಿ ಕೂಡ್ರುವನು) (ಅವನನ್ನು ದಿಟ್ಟಿಸಿ ದೀರ್ಘವಾದ ಉಸಿರೆಳೆದು) ಹೂಂ, ಅಂತೂ ಗಾದೆಯ ಮಾತನ್ನ ಖರೇ ಮಾಡಿದಿ ಅಪ!

ಶಾಮು:-(ಹುಸಿನಗೆಯಿಂದ) ಇದು ಯಾವ ಗಾದೆ ಸುರಳಿಯನ್ನು ಉರುಳಿಸುವೆ?

ವೆಂಕಣ್ಣ:-ನಿನ್ನದಲ್ಲಪಾ ಇದೂ, ಹಿರೇರ ಕಾಲದಿಂದ ಬಂದದ್ದು. ದೊಡ್ಡವರ ಮಕ್ಕಳು ಸಣ್ಣವರು ಇರ್ತಾರ—ಅಂತ!

ಶಾಮು:-(ಮೇಲಿನಂತೆಯೆ) ಇಷ್ಟೊತ್ತು ನಿನ್ನ ದೊಡ್ಡವರ ಕತೆ ಹೇಳಿದೆ—

ವೆಂಕಣ್ಣ:-(ಏಳುತ್ತ) ಹುಚ್ಚ ಇದ್ದೀ, ಶಾಮು, ನೀನು? ಮ್ಯಾಲೆ ಸ್ವಂತಕ್ಕ ಶಾಣ್ಯಾ ಅಂತ ತಿಳಿದು ಕೊಳ್ಳೋ ಮರ-ಹುಚ್ಚ ಇದ್ದೀ! (ಶಾಮುನು ಮುಖವೆತ್ತಿ ತನ್ನನ್ನು ನೋಡಲು, ಅವನನ್ನು ಎದುರಿಸದೆ ರಂಗದ ಮುಂತುದಿಯತ್ತ ನಡೆಯುತ್ತ) ನನಗೊತ್ತು ನಿಮ್ಮಂಥವರ ಬುದ್ಧಿವಂತಿಕೆ. ಸ್ವಂತಕ್ಕ ವಿಚಾರ ಇಲ್ಲ, ಮಂದೀ ಅಭಿಪ್ರಾಯ ಮುಖಪಾಠ ಹೇಳ್ತೀರಿ;

ಸ್ವಂತಕ್ಕ ತತ್ವ ಇಲ್ಲ, ಇನ್ನೊಬ್ಬರ ನೈತಿಕ ಜೀವನಕ್ಕ ನಗತೀರಿ; ಮಾಡೋ ಧೈರ್ಯ ಇಲ್ಲ, ಆಡೋದರಿಂದ ಅದನ್ನ ತುಂಬಿಕೋತೀರಿ. ಹಂ! ಗಾಂಧೀಜಿ ಬ್ಯಾರೆ ಅಂತ ಪಾರ್ಟಿ ಬ್ಯಾರೆ ಅಂತ! ಅಂದ್ರೇನು? ಜಯರಾಯ್ರು ಗಾಂಧೀಜಿಯವರ ಶಿಷ್ಯ ಅಲ್ಲ ಅಂತೀಯಾ? (ಹಾಗೆ ಅಲ್ಲ ಎಂದು ಶಾಮುನು ತಲೆ ಅಲ್ಲಾಡಿಸುವನು.) ಜಯರಾಯರು ಪಾರ್ಟಿಯ ಮನುಷ್ಯರು ಅಲ್ಲ ಅಂತೀಯಾ? (ಶಾಮುನು ತಲೆತೂಗಲು) ಏನೂ? ಏನಂತಿ? ಅಲ್ಲ? ಪಾರ್ಟಿಗೆ ಸೇರಿದವರಲ್ಲ ಜಯರಾಯ? ಅಲ್ಲೋ— (ಆವೇಶದಿಂದ) ಜಯರಾಯರು—

[ಒಮ್ಮೆಲೆ ಒಳಗಿನಿಂದ ಬರುತ್ತ, ರಂಗಮ್ಮ:-"ಬಂದರೇನು?"]

ವೆಂಕಣ್ಣ:-(ದಿಗ್ಭ್ರಾಂತನಾದವನಂತೆ) ಯಾರು? ಏನಂದಿರಿ? (ರಂಗಮ್ಮನನ್ನು ನೋಡಿ ಎಚ್ಚತ್ತವನಂತೆ) ಯಾವ ಹಾದೀ ನೋಡತೀರಿ ರಂಗಮ್ಮ?

ರಂಗಮ್ಮ:-(ರಂಗದ ಮೇಲೆ ಬಂದು) ಯಾರದೇನು? ಇವರದೆ. ಕೈ ಹಿಡಿದ ವ್ಯಾಲೆ ಹಾದೀ ನೋಡೋದೇ ಹಣೆಬರೆಹ.

ವೆಂಕಣ್ಣ:-ಹ ಹ! Thats' a good one. ("ಕೈ ಹಿಡಿದ." ...ಮುಂತಾಗಿ ತನ್ನಷ್ಟಕ್ಕೆ ಅಂದುಕೊಳ್ಳುವನು.)

ರಂಗಮ್ಮ:-ಅಲ್ಲ, ಧನಿ ಕೇಳಿಸಿದ್ಹಾಂಗ ಆತು.



ಶಾಮು:-ವೆಂಕಣ್ಣ ಲೆಕ್ಚರ್ ಕೊಡತಿದ್ದ—

ವೆಂಕಣ್ಣ:-(ನಗುತ್ತ) ನಿಮ್ಮ ಸುಪುತ್ರನ ಇಂಟರವ್ಯೂ ತೊಗೋತಿದ್ದೆ, ನಂ ಪೇಪರದಾಗ ಛಾಪಿಸಲಿಕ್ಕೆ—(ಶಾಮುನಿಗೆ) ಪೇಪರದಾಗ ಹಾಕತೀನಿ ಇದನ್ನೆಲ್ಲಾ ಅಂದೆ!

ಶಾಮು:-ಓಹೋ! ಅಗತ್ಯ ಹೆದರಸತೀ ಏನು ನನ್ನ? ಇಂಥಾದ್ದನ್ನ ಯಾರೂ ಓದೋದಿಲ್ಲ ಅನ್ನೋ ಧೈರ್ಯ ಅದ ನನಗ.

ರಂಗಮ್ಮ:-(ಗೋವಿಂದಪ್ಪ ಇಲ್ಲದ್ದನ್ನು ನೋಡಿ) ಯಾರು, ಗೋವಿಂದಪ್ಪ ಹೋಗ್ಯಾನೇನು ಇವರ್ನ ನೋಡಲಿಕ್ಕೆ?

ವೆಂಕಣ್ಣ:-ಆಹಾ ನೂರು ವರ್ಷ...ಆಯುಷ್ಯ. (ಎದುರಿನ ಬಾಗಿಲ ಹತ್ತಿರ ಹೋಗಿ ನೋಡುವನು. ಉಳಿದಿಬ್ಬರೂ ಆ ಕಡೆ ನೋಡುವರು-ಮೊದಲು

ಹೊರಗೆ ತುಸು ಬೆಳಕು ಕಾಣುವದು. ಕ್ರಮೇಣ ಆ ಬೆಳಕು ಹತ್ತಿರ ಬರುವದು. ಆಮೇಲೆ ಕೈಯಲ್ಲಿ ಕಂದೀಲನ್ನು ಹಿಡಿದ ಗೋವಿಂದಪ್ಪ, ಆವನ ಹಿಂದೆ ಜಯರಾಯರು ಪಾವಟಿಗೆ ಹತ್ತುವದು ಕಾಣಿಸುವದು. ಒಂದು ನಿಮಿಷದಲ್ಲಿ ಇಬ್ಬರು ಒಳಗೆ ಬರುವರು.)

[ಜಯರಾಯರ ಮುಖದಲ್ಲಿ ಉಲ್ಲಾಸದ ಕಳೆಯಿದೆ. ಮೂವರೂ ಹೀಗೆ ನಿಂತದ್ದನ್ನು ನೋಡಿ ಮುಗುಳ್ನಗೆಯ ಮುಖ-ಮುದ್ರೆಯಿಂದ-]

ಜಯರಾಯ: ಇದೇನು? ಸ್ವಾಗತ ಮಾಡಲಿಕ್ಕೆ ನಿಂತ ಹಾಂಗ ನಿಂತಿರಲ್ಲ?

(ಮಾತನಾಡುತ್ತಲೇ ಹೊದ್ದುಕೊಂಡ ದೋತರವನ್ನು, ತಲೆಯ ಮೇಲಿನ ಟೊಪ್ಪಿಗೆಯನ್ನು ತೆಗೆಯುವರು-ಅದನ್ನು ನೋಡಿ ಗೋವಿಂದಪ್ಪನು ಕಂದೀಲನ್ನು ಹೊರಗಿಟ್ಟು ತಟ್ಟನೆ ಬಂದು ಅವನ್ನು ರಾಯರ ಕೈಯಿಂದ ತೆಗೆದುಕೊಳ್ಳುವನು.)

ರಂಗಮ್ಮ:-ಮನೀಗೆ ಬರೋದೆ ಅಪರೂಪ ಆದ ಮ್ಯಾಲೆ ಬಂದಾಗೊಮ್ಮೆ ಆದ್ರೂ ಕಣ್ತುಂಬ ನೋಡಬೇಕೂ ಅಂತ—

ಜಯರಾಯ:-ಅಂದ ಹಾಂಗ ತಡ ಆಯ್ತಲ್ಲ? ಒಂಭತ್ತು ಹೊಡೀತೊ ಏನೋ? ಏ, ಶಾಮಾ! ಅಲ್ಲೀ ತನಕ ರೇಡಿಯೊ ಹಚ್ಚು, ಸುದ್ದಿ ಆದ್ರೂ ಕೇಳೋಣು.

ಶಾಮು:-(ಕೈಗಡಿಯಾರವನ್ನು ನೋಡುತ್ತ) ಸುದ್ದಿ? ಅಂ—ವ್ಯಾಳ್ಯಾ ಆಗಿ ಹೋಯ್ತು ಅಂತ ಕಾಣ್ತದ. (ವೆಂಕಣ್ಣನನ್ನು ಓರೆಗಣ್ಣಿನಿಂದ ಸೂಚ್ಯವಾಗಿ ನೋಡುವನು)

ವೆಂಕಣ್ಣ:-ಅಂಥಾದೇನೂ ಸುದ್ದಿ ಇಲ್ಲ ಬಿಡ್ರಿ, ರಾಯರ; ನಾನೂ ಆಫೀಸಿನಿಂದ ಬಂದೀನಿ. ನಿಮ್ಮ ಊಟ ಆಗಲಿ, ನಿಮ್ಮಿಂದಲೇ ಸುದ್ದಿ ಕೇಳಬೇಕೂ ಅಂತ ನಾ ಬಂದೀನಿ.

ರಂಗಮ್ಮ:-ನೀವು ಊಟಕ್ಕ ಏಳಬೇಕೂ ಅಂತಾನ ವೆಂಕಣ್ಣ.

ಜಯರಾಯ:-(ಮುಗುಳ್ನಗೆಯಿಂದ) ತಿಳೀತ, ತಿಳೀತು! ಬಂದೆ ನಡೆ. ಅಂ — ವೆಂಕಣ್ಣನೂ ಬರಲೇನು ಊಟಕ್ಕ?

ವೆಂಕಣ್ಣ:-(ಲಗುಬಗೆಯಿಂದ) ರಾಯರ, ನನ್ನ ಊಟ—

ರಂಗಮ್ಮ:-[ನಡುವೆಯೆ] ಆಗಿದ್ದರ ಇನ್ನೊಮ್ಮೆ ಉಣ್ಣು. ಪೇಪರದಾಗ

ಕೆಲಸಾ ಮಾಡಾವ ಬೇಕಾದ್ದನ್ನ ದಕ್ಕಿಸಿಕೊಳ್ಳಬೇಕು ನೀನು!(ಎನ್ನುತ್ತ ಒಳಗೆ ಹೊರಡುವಳು)

(ಮೊದಲು ಮೂವರೂ ಒಬ್ಬರನ್ನೊಬ್ಬರು ನೋಡುವರು. ಗೋವಿಂದಪ್ಪನೂ ಈ ಮೂವರನ್ನೇ ದಿಟ್ಟಿಸುತ್ತಿರುವನು. ಒಂದೆರಡು ನಿಮಿಷಗಳಲ್ಲಿ —)

ಜಯರಾಯ:-ಆದರೂ, ವೆಂಕಣ್ಣಾ, ನಿನಗೂ ದಕ್ಕಲಾರದಂತಹ ಸುದ್ದೀ ಹೇಳ್ತೀನಿ.

ಗೋವಿಂದಪ್ಪ:-(ಹೆಮ್ಮೆಯ ದನಿಯಲ್ಲಿ) ಆ ಬಾಬೂನ ಕತೆ ಹೇಳಿರಿ! ಹ ಹ!

ಜಯರಾಯ:-ಗೋವಿಂದಪ್ಪ, ಹಾಗೇ ಬರುವಾಗ ಒಂದು ತಂಬಿಗೆ ನೀರು ತೊಗೊಂಡು ಬಾ, ಇಲ್ಲಿಯೆ ಹೊರಗ ಕೈಕಾಲು ತೊಳೆದುಕೋತೇನಿ.

ಗೋವಿಂದಪ್ಪ:-ಬಂದೆ—ಆಂ—ಅಂದ್ರ—ತಂದೆ. ಬಾಬೂನ ಕತೆ! ಹ ಹ! (ಎನ್ನುತ್ತ ಒಳಗೆ ಹೋಗುವನು.)

[ವೆಂಕಣ್ಣನು ಸೂಚ್ಯವಾಗಿ ರಾಯರನ್ನು ನೋಡುವನು.]

ಜಯರಾಯ:-(ಮೇಜಿನ ಮುಂಬದಿಯ ಕುರ್ಚಿಯಲ್ಲಿ ಕೂಡ್ರುತ್ತ) ಮಾರ್ಕೆಟದ ಅಡಿಗಲ್ಲನ್ನ ಇಡೋದು ಗೊತ್ತಾಯ್ತು—

ವೆಂಕಣ್ಣ:-(ಉತ್ಸಾಹ ಆತುರಗಳ ದನಿಯಲ್ಲಿ) ಆಂ? ಏನಂದಿರಿ? ಗೊತ್ತಾಯ್ತು! ಹನ್ಮಂತಪ್ಪನ ಜನಾ ಒಪ್ಪಿದರೇ? ಏನು—majority...

ಜಯರಾಯ:-(ನಡುವೆಯೆ) ಎಲ್ಲಾರೂ ಒಪ್ಪಿದರು. ಸರ್ವಾನುಮತದಿಂದ ಗೊತಾಯ್ತು. ಇದೇ ೩ನೇ ತಾರೀಖಿನ ಮುಂಜಾನೆ—

ವೆಂಕಣ್ಣ:-(ಇನ್ನೂ ಚಕಿತನಾಗಿ) ಆಂ? ಏನಂದಿರಿ? ಇನ್ನ ಹತ್ತೇದಿವಸದೊಳಗ? ಯಾರನ್ನ ಕರಿಸೋವನ್ನ ಗೊತ್ತುಮಾಡಿದಿರಿ? ಅಲ್ಲ—ರಾಯರ—ಹತ್ತು ದಿನಗಳೊಳಗ ಬರೋ ದೊಡ್ಡ ಮನುಷ್ಯಗ ಶಕ್ಯ ಹ್ಯಾಂಗ ಆಗ್ಬೇಕು ಅಂತೀನಿ.

ಜಯರಾಯ:-ಎಲ್ಲಾ ಹೇಳ್ತೀನಿ, ತಡೀರಿ. ನಿಮಗ ಯಾರಿಗೂ ಕಲ್ಪನಾ ಇ..ಲ್ಲ...ದಂತಹ ದೊಡ್ಡ ಮನುಷ್ಯರು ಬರೋವರಿದ್ದಾರ.

(ಗೋವಿಂದಪ್ಪನು ಬರುವನು. ಅವನಿಂದ ನೀರಿನ ಪಾತ್ರೆಯನ್ನು ತೆಗೆದುಕೊಂಡು ಎದುರಿನ ಬಾಗಿಲತ್ತ ಹೊರಡುತ್ತ) ಆದರೆ, ಅದಕೂ ಮುಂಚೆ ಇನ್ನೊಂದು ಮೋಜಾಯ್ತು. (ಬಾಗಿಲಿನಿಂದ ಹೋಗಿ ಪಾವಟಿಗೆ ಇಳಿದು ಮರೆಆಗುವನು.)

ಗೋವಿಂದಪ್ಪ:-ಹಹ! ಹಹಹ! (ನಗೆ ತಡೆಯದೆ) ಹಹಹಹಹಾ!

ವೆಂಕಣ್ಣ:-ಅಂಥಾದ್ದೇನು ಮೋಜು? ಗೋವಿಂದಪ್ಪಾ?

ಗೋವಿಂದಪ್ಪ:-(ನಗೆ ತಡೆಯುತ್ತ) ರಾಯರೇ ಹೇಳ್ಬೇಕು, ಅಂವರೇ ಮೋಜು.

ಜಯರಾಯ:-(ಒಳಗೆ ಬಂದು ಪಾತ್ರೆಯನ್ನು) ಎಡಗೈಯಿಂದ ಗೋವಿಂದಪ್ಪನಿಗೆ ಕೊಡುತ್ತ ಬಲಗೈಯಿಂದ ಕಾಲ್ಗಳನ್ನು ಒರೆಸಿಕೊಳ್ಳುತ್ತ) ಆಂ— ಏನಂದಿ? ಬಡಿಸಿದ ಕೂಡಲೆ ಬಂದು ಹೇಳು, ಗೋವಿಂದಪ್ಪ. (ಗೋವಿಂದಪ್ಪನು ನಗೆಮೊಗದಿಂದಲೇ ಒಳಗೆ ಹೋಗುವನು.)

ವೆಂಕಣ್ಣ:-ಗೋವಿಂದಪ್ಪಗ ನೀವು ಹೇಳೋ ಮಾತು ಒಳ್ಳೇ ಮನಸ್ಸು ಹಿಡಿದ್ಹಾಂಗ ಕಾಣ್ತದ.

ಜಯರಾಯ:-(ಮತ್ತೆ ಮುಂಬದಿಯ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತ) ಆಂ? ಗೋವಿಂದಪ್ಪ? ಹೌದು. ಜಗತ್ತು ತಿರುಗಿ ಬಿದ್ದರೂ ಅವನೊಬ್ಬನ ಪಾಲಿಗೆ ನಾ ದೊಡ್ಡಮನುಷ್ಯ. ವೆಂಕಣ್ಣಾ, ಕೂಡು— ಉಹುಂ— ಈಗ ನಾ ಏನ ಹೇಳ್ತೀನಿ ಅದನ್ನ ಬರೆಯೋ ಹಾಂಗಿಲ್ಲ, ಪೇಪರದಾಗ ಪ್ರಕಟಿಸೋ ಹಾಂಗಿಲ್ಲ; ನಂ ನಿಮ್ಮ ಮರ್ಯಾದೆ ಪ್ರಶ್ನೆ ಇದು. ಏನಾಯ್ತಂತೀ, ವೆಂಕಣ್ಣಾ? (ಒಮ್ಮೆಲೆ ಶಾಮನಿಗೆ) ಶಾಮು, ಮಧ್ಯಾಹ್ನಕ್ಕೆ ನಾ ಮೀಟಿಂಗಿಗೆ ಅಂತ ಹೋದ ಮ್ಯಾಲೆ ಹನ್ಮಂತಪ್ಪ ಬಂದಿದ್ದನೇನು ಇಲ್ಲಿ?

ಶಾಮು:-ಅವನೂ ಶೀನಪ್ಪನೂ ಇಬ್ಬರೂ ಬಂದಿದ್ದರು.

ಜಯರಾಯ:-ಹಂ—(ಎಂದು ವಿಚಾರಿಸಿದಂತೆ ಮಾಡುವನು. ಇಷ್ಟರಲ್ಲಿ ವೆಂಕಣ್ಣನು ಸಣ್ಣ ಮೇಜಿನ ಹಿಂದಿದ್ದ ಕುರ್ಚಿಯ ಕೈಮೇಲೆ, ಬಂದು ಕಾಲನ್ನಿಳೀ ಬಿಟ್ಟು, ಕೂತಿರುವನು.) ಹಂ— ನೀ ಕೇಳಿದೆಲ್ಲ ವೆಂಕಣ್ಣಾ, ಯಾವ ದೊಡ ಮನುಷ್ಯ ಬರತಾನಂತ? ಯಾವನಾದರೊಬ್ಬ ಮಂತ್ರೀನ್ನ ಕರೆಯಿಸ

ಬೇಕೂ ಅಂತ ಸೂಚನಾ ಬಂದಿತ್ತು.

ವೆಂಕಣ್ಣ:-ಕಡೆಗೆ ಯಾರನ್ನ ಕರೆಸೂದು ಗೊತ್ತಾಯ್ತು?

ಜಯರಾಯ:-ಬಾಬೂನ್ನ.

ಶಾಮು:-(ಚಕಿತನಾಗಿ) ಆಂ?—

ವೆಂಕಣ್ಣ:-(ಬಾಯಿದೆರದು) ಯಾರನ್ನಂದಿರಿ ರಾಯ್ರ?

ಜಯರಾಯ:-ಬಾಬು. ನಮ್ಮೂರ ಬಾಗವಾನರ ಬಾಬು.

[ಒಂದು ನಿಮಿಷ ದಂಗು ಬಡೆದಂತೆ ಸ್ತಬ್ಧ]

ಜಯರಾಯ:-(ಏಳುತ್ತ) ನಿನಗೇನನ್ನಿಸ್ತದೋ, ವೆಂಕಣ್ಣಾ?

ವೆಂಕಣ್ಣ:-(ಪ್ರಶ್ನೆ ಅನಿರೀಕ್ಷಿತವಾಗಿ) ಆಂ? ನನಗ ಅಂದಿರಿ? (ಹುಸಿನಗೆಯಿಂದ) ನಾನು ಪತ್ರಿಕಾ ಪ್ರತಿನಿಧಿ ರಾಯರೇ; ಮಂದೀ ಅಭಿಪ್ರಾಯ ಪ್ರಕಟಿಸುವವ, ನನಗ ಅಭಿಪ್ರಾಯ ಇಲ್ಲ.

ಜಯರಾಯ:-ನಿನಗೇನನ್ನಿಸ್ತದೋ ಶಾಮಾ?

ಶಾಮು:-(ಚಕಿತನಾಗಿ) ನನಗ? ನಾನು—ಆ ಬಗ್ಗೆ ವಿಚಾರ ಮಾಡೇ ಇಲ್ಲ.

ಜಯರಾಯ:-(ಇಬ್ಬರನ್ನೂ ನೋಡುತ್ತ) ಅಂತೂ ಇಬ್ಬರೂ ಪ್ರಶ್ನೆ ಹಾರಿಸಿಕೊಂಡಿರಿ!

ವೆಂಕಣ್ಣ:-(ಅಪರಾಧಿತನಂತೆ) ಪ್ರಶ್ನೆ ಹಾರಿಸಿಕೊಳ್ಳೋದಲ್ಲ, ರಾಯರ. ಅಂದ್ರ ಮೊದಲಿನಿಂದಲೂ ಸುದ್ದಿ ಇದ್ದಿತು. ಯಾರಾದರೂ ದೊಡ್ಡ ಮನುಷ್ಯ ಬರೋವ್—

ಜಯರಾಯ:-(ನಡುವೆಯೆ) ದೊಡ್ಡ ಮನುಷ್ಯ? (ದನಿ ಬಿರುಸಾಗುತ್ತ) ದೊಡ್ಡ ಮನುಷ್ಯ! ದೊಡ್ಡ—ಅಂದ್ರೇನು ರಾಕ್ಷಸ ಆಕಾರದವ ಅಂತೀ ಏನು?

ವೆಂಕಣ್ಣ:-ಅಲ್ಲ - ಅಂದ್ರ—

ಜಯರಾಯ:-(ತಿರಸ್ಕಾರದಿಂದ) ಹುಂ—(ಎಂದು ಉಸಿರೆಳೆಯುವನು) ದೊಡ್ಡ ಮನುಷ್ಯ! (ಬೆನ್ನಿಗೆ ಕೈ ಕಟ್ಟಿ ರೇಡಿಯೋದ ಕಡೆ ನಡೆಯುತ್ತ) ದೊಡ್ಡ ಮನುಷ್ಯ! ಯಾರು—ಯಾರು ದೊಡ್ಡ ಮನುಷ್ಯ? ಇಂದಿಗೆ ಇಪ್ಪತ್ತೈದು ವರ್ಷಗಳ ಮೇಲಾಯ್ತು, ಮಹಾತ್ಮಾಜಿಯವರು ನಮಗೆ ಪ್ರತ್ಯಕ್ಷದಿಂದ ಪಾಠ ಕಲಿಸಿಕೊಟ್ಟರು, ದರಿದ್ರ ನಾರಾಯಣನೇ ದೊಡ್ಡ ಮನುಷ್ಯ ಅಂತ. ಅವರ ಮುಂದಾಳುತನದೊಳಗ ಬೆಳೆದಿವಿ, ಕಾಂಗ್ರೆಸ ಸಂಸ್ಥಾ ಕಟ್ಟಿದಿವಿ, ಅವರ ಕ್ರಾಂತಿಕಾರಕ ವಿಚಾರಗಳ ಪ್ರಚಾರಕರಾದಿವಿ; ಆದರೆ ಇಂದು ಅಂತಹನೆ ಒಬ್ಬ ಮಂತ್ರಿ ಆದ, ಅಷ್ಟಕ್ಕ ಅವನೇ ದೊಡ್ಡ ಮನುಷ್ಯ ಆದ! ಹುಂ. [ಶಾಮುನು ಅರ್ಥಗರ್ಭಿತ ದೃಷ್ಟಿಯಿಂದ ವೆಂಕಣ್ಣನನ್ನು ನೋಡುವನು.] ವ್ಯಾಲೆ ಪ್ರಜಾಪ್ರಭುತ್ವ! ಬಾಯಿಯಿಂದ ಹೇಳಲಿಕ್ಕೆ ಎಲ್ಲರೂ ಸಮಾನರು, ಸನ್ಮಾನಕ್ಕೆ ಮಾತ್ರ ಅಧಿಕಾರ ಇಲ್ಲದವರು ಸಣ್ಣವರು; ದೊಡ್ಡಸ್ತನಕ್ಕ ದರಿದ್ರರು ಅಯೋಗ್ಯರು! (ಇಷ್ಟರಲ್ಲಿ ರೇಡಿಯೋದ ಬಲಬದಿಯ ಕುರ್ಚಿಯ ಹತ್ತಿರ ಬಂದಿದ್ದಾರೆ. ಮಾತು ತಡೆದು, ತಿರುಗಿ ನಿಂತು, ಮುಖವನ್ನೆತ್ತಿ ವೆಂಕಣ್ಣನನ್ನು ನೋಡುತ್ತ) ತಿಳೀತೇನು? ವೆಂಕಣ್ಣಾ, ಪ್ರಜಾಪ್ರಭುತ್ವದ ಸ್ವಾತಂತ್ರ್ಯಗಳಿಸಿದ ನಾವೇ ಈ ಮಾತನ್ನ ಹೇಳತಾ ಇದ್ದೀವಿ! (ಅಣಕಿನ ದನಿಯಿಂದ) ಬರೆದು ಕೊಳ್ಳತೀಯಾ ಇದನ್ನ? ಪ್ರಕಟಿಸತೀಯಾ ಇಂತಹ ಅಭಿಪ್ರಾಯಗಳನ್ನ? ನಿನ್ನ ಪತ್ರಿಕೆಯ ರಾಷ್ಟ್ರೀಯತಾ ಇನ್ನಿಷ್ಟು ಉಜ್ವಲ ಆಗಿ ಪತ್ರಿಕಾನೇ ಸುಟ್ಟು ಹೋದೀತು!

ವೆಂಕಣ್ಣ:-ಆದರೂ, ರಾಯರ, ಪ್ರಾಮಾಣಿಕ ಅಭಿಪ್ರಾಯ ಹೇಳೋವರು ಬೇಕು ನಮಗ.

ಜಯರಾಯ:-(ತುಸು ಸಿಟ್ಟಿನಿಂದ) ಬೇಕು? ಯಾಕೆ ಬೇಕು? ನಿಮ್ಮಿಂದ ಛೀ ಅನ್ನಿಸಿಕೊಳ್ಳಲಿಕ್ಕೆ! ನಿಮ್ಮಿಂದ ಕಲ್ಲು ಒಗೆಯಿಸಿಕೊಳ್ಳಲಿಕ್ಕೆ! ನಿಮ್ಮಿಂದ ಹೊಡೆಸಿಕೊಂಡು ಸತ್ತು ಗೆದ್ದು ಉಳಿದದ್ದಕ್ಕೆ ನೀವೇ ಇನ್ನಿಷ್ಟು ದೊಡ್ಡವರೂ ಅಂತ ಸಿದ್ಧಮಾಡಲಿಕ್ಕೆ! ವೆಂಕಣ್ಣಾ, ವೆಂಕಣ್ಣಾ, ಇಂದಿನ ಪರಿಸ್ಥಿತಿಯೊಳಗ ಪ್ರಾಮಾಣಿಕತನದ ಪ್ರಯೋಜನ ಅಂದರ, ಠಕ್ಕತನದ ಪತಾಕೆಯನ್ನು ನಿಲ್ಲಿಸಲಿಕ್ಕೆ!

ವೆಂಕಣ್ಣ:-(ಮೇಜಿನ ಮುಂದೆ ಬಂದು ತುಸು ಧೈರ್ಯದ ದನಿಯಲ್ಲಿ) ರಾಯರ, ಈ ಹೊತ್ತು ಸಭಾದೊಳಗ ಏನಾಯ್ತು ಹೇಳಿರಿ, ಎಲ್ಲಾ ಪ್ರಕಟಿಸತೀನಿ. ನಿಮಗ ವಚನ ಕೊತ್ತೀನಿ, ಎಷ್ಟಾದರೂ ಸುದ್ದಿ ಅದು, ನಡೆದ ಸುದ್ದಿಯನ್ನು ಪ್ರಕಟಿಸಲಿಕ್ಕೆ—

ಶಾಮು:-(ನಡುವೆಯೆ) ನಪುಂಸಕತ್ವಾರಿ ಅಡ್ಡ ಬರತದ!

ವೆಂಕಣ್ಣ:-(ಚಕಿತನಾಗಿ) ಆಂ, (ಎಂದು ಶಾಮುನನ್ನು ನೋಡುವನು.)

ಜಯರಾಮು:-(ಒಂದು ನಿಮಿಷ ಮುಗನನ್ನು ದಿಟ್ಟಿಸಿ, ವೆಂಕಣ್ಣನಿಗೆ) ನಿಜ. ನಿಮ್ಮ ಪತ್ರಿಕೆಗೆ ಜಾಹೀರಾತನ್ನು ಕೊಡುವವರು ಯಾರು? ನಿಮ್ಮ ಪತ್ರಿಕೆಯ ಪೌರುಷ ನಿಂತಿರೋದು—(ತಡೆದು ಶಾಮುನ ಕಡೆ ನೋಡಲು)

ವೆಂಕಣ್ಣ:-(ವಾಕ್ಯವನ್ನು ಪೂರ್ತಿಗೊಳಿಸುತ್ತ) ನಪುಸಂಕತ್ವಾರಿ ಜಾಹೀರಾತಿನ ಮ್ಯಾಲೆ! (ಮೇಜಿನ ಮೇಲೆ ಕೂಡ್ರುತ್ತ) ನಿಜ! ಆದರೂ—ಆದರೂ–(ಏನು ಹೇಳಬೇಕೆಂಬುದು ತಿಳಿಯದೆ, ಕೊನೆಗೆ) ಆದರೂ ತಪ್ಪು ಯಾರದು?

ಜಯರಾಮು:-(ರೇಡಿಯೋದ ಬಲಬದಿಯ ಕುರ್ಚಿಯಲ್ಲಿ ಕೂಡ್ರುತ್ತ) ತಪ್ಪು ಯಾರದು? ನಾನೂ ಅದನ್ನೇ ಕೇಳ್ತೀನಿ, ವೆಂಕಣ್ಣಾ. ಈ ಹೊತ್ತು ಸಭಾದೊಳಗೆ ಒಂದು ಮಾತು ಹೇಳಿದೆ ನಾನು. ನಮ್ಮೂರಿಗೆ drainage ಇಲ್ಲ, ತಪ್ಪಿ ನನ್ನ ಬಾಯಿಗೆ drainage ಅನ್ನೊ ಶಬ್ದನೇ ಬಂತು "Drainage ಇಲ್ಲ" ಅಂದೆ. "ಇಲ್ಲದಿದ್ದರ ತರಿಸೋಣ ಮುಂಬಯಿಯಿಂದ" ಅಂದ ಒಬ್ಬ ಕೌನ್ಸಿಲರ! ನಗತೀಯಾ, ವೆಂಕಣ್ಣಾ, ಈ ಮಾತಿಗೆ? ಇದೂ ಹೋಗಲಿ. "ಬರೇ ಮಾನಪತ್ರ ಕೊಟ್ಟರ ಉಪಯೋಗ ಇಲ್ಲ" ಅಂತ ನಾ ಅಂದರ, "ಹಾಂಗಿದ್ದರ ಅದನ್ನ ರಜಿಸ್ಟರ ಮಾಡಿ ಕಳಿಸೋಣ" ಅಂತ ಇನ್ನೊಬ್ಬ ಅಂದ! ತಪ್ಪು ಯಾರದು? ಧಡ್ಡತನ ಯಾರ ತಪ್ಪು? ಧಡ್ಡರದಲ್ಲ, ಬುದ್ಧಿವಂತರದು. ಅದರಂತೇ ದೊಡ್ಡಿಸ್ತನ ಅನ್ನೋದು ದೊಡ್ಡವರ ತಪ್ಪು.

ವೆಂಕಣ್ಣ:-(ಹುಸಿ ನಗೆಯಿಂದ) ಏನೇ ಆಗಲಿ, ಕಡೆಗೆ ನಿಮ್ಮ ಮಾತಿಗೆ ಒಪ್ಪಿದರಲ್ಲ?

ಜಯರಾಯ :-ಆದರೆ ಒಪ್ಪಿದ್ದನ್ನು ಅವರು ಮರೀತಾರ ಅಂತೀ ಏನು? ನಾನು ಸಹಿತ ಮರೀಲಾರದಹಾಂಗ ಮಾಡ್ತಾರ, ನನಗ್ಗೊತ್ತು (ಏಳುತ್ತ ವಿಷಾದದ ನಗೆಯಿಂದ) ಮಾರ್ಕೆಟ್ಟಿನ ಅಡಿಗಲ್ಲನ್ನು ಇಡಲಿಕ್ಕೆ ಮಂತ್ರೀನ್ನ ಕರೆಸೋಣ, ಅಂದರು. ನಮ್ಮೂರ ಮಾರ್ಕೆಟ್ಟದಾಗ ಪಲ್ಲೆಮಾರಲಿಕ್ಕೆ ಕೂತ ಅನುಭವ ಯಾವ ಮಂತ್ರಿಗೆ ಅದ ಅಂತ ನಾನೂ ಕೇಳಿದೆ! ನಾನೇನೊ ಮಾತಿನೊಳಗ ಗೆದ್ದೆ, ಆದರೆ ಅದೇ ಮಾತಿಗೇನೇ ನಾನು ಸೋತೆ.

ವೆಂಕಣ್ಣ:-ಆಂ? ಅಂದ್ರೆ?

ಜಯರಾಯ:-ನನ್ನ ಮಾತನ್ನು ಒಪ್ಪಿ ಅವರು ಹುಂ ಅಂದಿಲ್ಲೊ, ವೆಂಕಣ್ಣಾ, ಅದನ್ನ ವಿರೋಧಿಸಲಿಕ್ಕೆ ಹೆದರಿ ಹುಂ ಅಂದಾರ. ಅದಕ್ಕೇ ಹೇಳಿದೆ, ಅವರು ಇದನ್ನ ಎಂದೂ ಮರೆಯೂ ಹಾಂಗಿಲ್ಲ ಅಂತ. ನನಗ ನಾಲ್ಕು ಮಂದಿ ಸಮಕ್ಷ ಅಂಜಿದಕ್ಕ ಒಳಗಿಂದೊಳಗೇ ಅವರು ನನ್ನ ದ್ವೇಷ ಮಾಡ್ತಾರ ಅನ್ನೋದೂ ನನಗ್ಗೊತ್ತು.

ವೆಂಕಣ್ಣ:-ಹೋಗಲಿ ಬಿಡಿರಿ, ರಾಯರ. ಅಂತೂ ಇದೇ ಜನವರಿ ೩೧ರ ಮುಂಜಾನೆ ಈ ಅಡಿಗಲ್ಲು ಸಮಾರಂಭ ಬಾಗವಾನ ಬಾಬೂನ—

ಶಾನು:-(ನಡುವೆಯೆ) ತಕ್ಕಡಿ ಹಸ್ತದಿಂದ—

ವೆಂಕಣ್ಣ:-ಆಂ? (ನಕ್ಕು)—ಹುಂ ತಕ್ಕಡಿಹಸ್ತದಿಂದ ಜರುಗೋದು ನಿಶ್ಚಯ ಹುದಲ್ಲೋ? ಇದನ್ನ ರಣಹಲಿಗೆಯೊಳಗೆ ಪ್ರಕಟಮಾಡಲಿಕ್ಕೆ ಅಡ್ಡಿ ಇಲ್ಲವಲ್ಲ?

ಜಯರಾಯ:-(ಲಕ್ಷ್ಯವಿಲ್ಲದವನಂತೆ) ಹುಂ-(ಎನ್ನುತ್ತ ಒಳಬಾಗಿಲಿನ ಕಡೆ ನಡೆಯುವನು.)

ವೆಂಕಣ್ಣ:-ಅಂದರ ಈಗಿಂದೀಗ ಆಫೀಸಿಗೆ ತಿಳಿಸೇಬಿಡತೇನಿ.

ಜಯರಾಯ:-(ಬಾಗಿಲ ಹತ್ತಿರ ತಿರುಗಿ ನಿಂತು) ಊಟ ಮಾಡಿಯೇ ಹೋಗಲ್ಲ?

ವೆಂಕಣ್ಣ:-ಅಲ್ಲ—ಅಂದ್ರ—

ಶಾಮು:-ಶರ್ಟ ತಗೀಲಾರದೇ ಕೂತೀಯಂತ, ಆಯಿತಿಲ್ಲೊ? (ತಂದೆ ತನ್ನನ್ನು ನೋಡಲು) ಒಳಗಿನ ಗುಟ್ಟು ಹೊರಬೀಳೋದು ಬ್ಯಾಡ.

(ಜಯರಾಯನು ಮುಗುಳ್ನಗೆ ನಗುತ್ತ ಒಳಗೆ ಹೋಗುವನು.)

ವೆಂಕಣ್ಣ:-(ಅವರು ಹೋದುದನ್ನು ಖಾತ್ರಿ ಮಾಡಿಕೊಂಡು) ರಾಯರ ಸ್ವಭಾವ serious ನೋಡು.

ಶಾಮು:-ಅದ್ಕೇ ಈ ಪರಿಸ್ಥಿತಿಯೊಳಗ ಅವರು comic ಕಾಣ್ತಾರ ನೋಡು.

ವೆಂಕಣ್ಣ:-ಅಂದ್ರ?? ಮತ್ತೆ ಸುರೂ ಆಯ್ತೇನು ನಿನ್ನ—

ಶಾಮು:-(ನಡುವೆಯೆ) ಭವಿಷ್ಯ. (ವೆಂಕಣ್ಣನು ದಿಟ್ಟಿಸಿ ನೋಡಲು) ನೋಡತೀ-ಏನು? ನಾ ಹೇಳೋದೆಲ್ಲ ಭವಿಷ್ಯ ಅಂತ ತಿಳಿ. ಈ ಹೊತ್ತಿನಿಂದಲೂ ಸುರೂ ಆಯ್ತು ನಾ ಹೇಳಿದ tragedy! ಮತ್ತೆ ಈ ಹೊತ್ತು ಅಲ್ಲಿ ಗಾಂಧೀಜಿಯವರ ಮ್ಯಾಲೆ ಒಗೆದ ಬಾಂಬ ಕೂಡ—

ಜಯರಾಯ:-(ಒಳಗಿನಿಂದಲೆ) ಏನು? ಏನದು? (ಎನ್ನುತ್ತ ಒಮ್ಮೆಲೆ ಹೊರಗೆ ಬರುವರು. ಅವರು ಅಂಗಿಯನ್ನು ತೆಗೆಯಲು ಎತ್ತಿದ ಎರಡೂ ಕೈಗಳನ್ನು ಹಾಗೇ ನಡುವೆಯೇ ಎತ್ತಿ ಹಿಡಿದಿದ್ದಾರೆ.) ಏನೊ? ಶಾಮಾ? ಗಾಂಧೀಜಿಯವರ ಮ್ಯಾಲೆ—?Bomb ಅ?

ವೆಂಕಣ್ಣ:-(ನಕ್ಕು) ಏನಿಲ್ಲ—ರಾಯರ. ಈ ಹೊತ್ತು ಪ್ರಾರ್ಥನಾ ಸಭಾದಾಗ—

ಜಯರಾಯ:-(ದಿಕ್ಕೆಟ್ಟವನಂತೆ) ಏನಿಲ್ಲಂತೇಯೇನು? (ಮುಂದೆ ಬಂದು) ನೋಡೊ, ಶಾಮಾ, ರೇಡಿಯೊ ಹಚ್ಚು, ನೋಡು. (ಹೊರಬಾಗಿಲ ಕಡೆ ನಡೆದು) ಏನ ಊರೊಳಗೆ ಹೋಗಿ ಬರಲ್ಯಾ, ಎಲ್ಲಿಯಾದರೂ ಸುದ್ದಿ— ಒಮ್ಮೆಲೆ ತಡೆದು) ಏ, ಗೋವಿಂದಪ್ಪಾ (ಒಳಬಾಗಿಲಿನ ಹತ್ತಿರ ಬಂದು) ಗೋವಿಂದಪ್ಪಾ—

[ಒಳಗಿನಿಂದ "ಬಂದೆ" ಎಂದು ಗೋವಿಂದಪ್ಪನ ಉತ್ತರ]

ವೆಂಕಣ್ಣ:-ರಾಯರ, ಬರೋಬರ ಅಂದ್ರ ಏನೂ ಇಲ್ಲ —ಆ bomb ಎಲ್ಲಿಯೊ ಬಿತ್ತಂತ—ಮಹಾತ್ಮಾಜಿಯವರು ನಕ್ಕ್ರು—

ಜಯರಾಯ:-(ನಡುವೆಯೆ) ಅವರು ನಗತಾರೋ—ಜೀವ ಹೋದರೂ ನಗುವವರೆ ಅವರು—

ರಾಮು:-(ನಡುವೆಯೆ) ಇಲ್ಲ,—ನಾನೇ ರೇಡಿಯೊ ಕೇಳ್ತಿದ್ದೆ-ಯಾರಿಗೂ ಏನೂ ಗಾಯ ಆಗಿಲ್ಲ-

ಜಯರಾಯ:-ನೀನೇ ಕೇಳಿದಿಯಾ?

ಗೋವಿಂದಪ್ಪ:-(ಬಂದು) ಯಾಕ ರಾಯ್ರು?

ರಾಮು:-ಅಹುದು ನಾನೇ ಕೇಳಿದೆ.

ಗೋವಿಂದಪ್ಪ:-ನನ್ನ ಕರೆದಿರೇನು, ರಾಯ್ರು?

ಜಯರಾಯ:-(ಗೋವಿಂದಪ್ಪನಿಗೆ) ತಡೀಯೊ, (ರಾಮುನಿಗೆ) ಏನಾಯ್ತಂತ?

ರಂಗಮ್ಮ:-(ಒಳಗಿನಿಂದ ಬಂದು) ಬಡಿಸಿದ್ದೆಲ್ಲ ತಣ್ಣಗಾಯ್ತು, ಬರ್ತೀರ್ಯೋ---

ಜಯರಾಯ:-(ರಂಗಮ್ಮನಿಗೆ) ತಡೀ, ಒಂದಿಷ್ಟು! ಇಲ್ಲಿ ಕೇಳಿಯಾದರೂ ಕೇಳು. ಗಾಂಧೀಜಿಯವರ ಮ್ಯಾಲೆ ಯಾರೊ bomb ವಗೆದರಂತ!

ಗೋವಿಂದಪ್ಪ:-ಆಂ? ಎಲ! ಏನಿದು ಅನರ್ಥ!

ರಂಗಮ್ಮ:-(ತಿಳಿಯದೆ) ಏನ್ಮಾಡಿದರಂತ?

ಜಯರಾಯ:-(ತುಸು ಸಿಡುಕಿನ ದನಿಯಲ್ಲಿ) bomb! bomb ವಗೆದರಂತೆ! ಬಿದ್ದರ ಪ್ರಾಣ ಹೋಗೋದು ತಕ್ಷಣ!

ರಂಗಮ್ಮ:-(ಉಸಿರೆಳೆದು) ಅಯ್ಯ-ನಿಮಗೇನು ಹುಚ್ಚು ಹಿಡೀತು ಇಷ್ಟುದಿನದ ಮ್ಯಾಲೆ! ಒಗೆದವನ ಕೈ ಸುಟ್ಟೀತು, ಆದರ ಅವರ ಒಂದು ಕೂದಲೆಳೆಗೆ ಧಕ್ಕೆ ತಗಲೋದಿಲ್ಲ!

ವೆಂಕಣ್ಣ:-ಹೌದು, ರಂಗಮ್ಮ, ಅವರಿಗೇನೂ ಆಗಿಲ್ಲ, ರಾಯ್ರು ಸುಮ್ಮನೆ-

ಜಯರಾಯ:-[ಮಾತಾಡಲು ಬಾಯಿಯನ್ನು ತೆರೆದು ಒಮ್ಮೆಲೆ ಮಾತನಾಡದೆ ದೊಡ್ಡ ಮೇಜಿನ ಮುಂದಿದ್ದ ಕುರ್ಚಿಯ ಮೇಲೆ ಕುಳಿತುಗೊಳ್ಳುವನು. ಗೋವಿಂದಪ್ಪನು ಸಣ್ಣ ಮೇಜಿನ ಹಿಂದಿದ್ದ ಕುರ್ಚಿಯು ರಂಗದ ತುದಿಗೆ ನಿಂತಿದ್ದಾನೆ. ರಂಗಮ್ಮನು ಇವರಿಬ್ಬರ ನಡುವೆ ಒಳಬಾಗಿಲ ಹತ್ತಿರ ನಿಂತಿದ್ದಾಳೆ. ವೆಂಕಣ್ಣನು ಸೋಫಾದ ಸಮೀಪಕ್ಕಿದ್ದಾನೆ ರಾಮನು ರೇಡಿಯೊದ ಎಡ ಕುರ್ಚಿಯ ಹತ್ತಿರ ನಿಂತಿದ್ದಾನೆ. ರಾಯರು ಕುಳಿತಿದ್ದನ್ನು ಉಳಿದ ನಾಲ್ವರೂ ನಿಂತಲ್ಲಿಯೇ ನೋಡುತ್ತ ನಿಲ್ಲುವರು. ಒಂದು ಕ್ಷಣ ಯಾರೂ ಮಾತನಾಡುವದಿಲ್ಲ. ಆಮೇಲೆ ರಾಯರು ಮೆಲ್ಲಗೆ ಮುಖವನ್ನೆತ್ತಿ ನಾಲ್ವರನ್ನೂ ನೋಡುವರು. ಆಮೇಲೆ ವೆಂಕಣ್ಣನಿಗೆ] ವೆಂಕಣ್ಣಾ, ಗಾಂಧೀಜಿಯವರಿಗೆ ಕ್ಷೇಮ ಅಂದರೆ ಜಗತ್ತಿಗೇ ಕ್ಷೇಮ. ನಿನಗೇನು ಗೊತ್ತು? (ಮುಂದಿನ ಮಾತು ತನ್ನಷ್ಟಕ್ಕೆ ಎನ್ನುವಂತೆ ಎದುರು ನೋಡುತ್ತ ನುಡಿಯುತ್ತಾರೆ.) ನೀವು ಹುಡುಗರು; ನಿಮಗೇನು ಗೊತ್ತು? ಆ ಮಹಾತ್ಮನ ಸಾನ್ನಿಧ್ಯದ ಅನುಭವ ನಿಮಗೇನು ತಿಳಿದೀತು? ಮೂವತ್ತು ಕೋಟಿ ಷಂಡರೊಳಗೆ ಪೌರುಷ ತುಂಬಿದ ಅದ್ಭುತ ಸಾಹಸಿ: ಮೂವತ್ತು ಕೋಟಿ ಹೆಣಗಳಲ್ಲಿ ಜೀವ ತುಂಬಿದ ಅಮರ ಮಾಯಾವಿ... (ಹೆಂಡತಿಗೆ) ನಿನಗೆ ಗೊತ್ತಿದೆ ಅಲ್ಲ? ಮೊದಲ ಸಲ ನಾನೂ ನೀನೂ ಅವರನ್ನ ಕಂಡಾಗಿನ ದೃಶ್ಯ! ಮುಖದಲ್ಲಿ ನಗೆ, ಕಣ್ಣಲ್ಲಿ ಕರುಣಾರಸ, ದನಿಯಲ್ಲಿ ಸಂಜೀವಿನಿ, ಸನ್ನಿಧಿಯಲ್ಲಿ ಸಾತ್ವಿಕಶಕ್ತಿ! ಆ ದಿನ ಮೊದಲು ನನಗ ವಕೀಲಿ ಬಿಡರಿ ಅಂದವರು ಯಾರು?

ರಂಗಮ್ಮ: (ಅರೆನಾಚಿದ ದನಿಯಲ್ಲಿ) ಏನೊ-ಏನೊ! ಖೋಡಿ! ಮನಸ್ಸೇ ಹಾಂಗಾಯ್ತು. ನೋಡು, ವೆಂಕಣ್ಣಾ, ಆ ಮಹಾತ್ಮನ್ನ ನೋಡಿದ ಕೂಡಲೆ ಹುಟ್ಟಿದ್ದು ಸಾರ್ಥಕ ಅನ್ನಿಸಿತು. ಅಂಥಾ ಪುಣ್ಯಾತ್ಮನ ಮಾತು ಕೇಳೋದಂದರ ಸಾವಿರ ಪುರಾಣಾ ಕೇಳಿದಷ್ಟು ಪುಣ್ಯ ಅನ್ನಿಸಿತು – ಥಟ್ಟನೆ ಇವರಿಗೆ ಹೇಳಿಬಿಟ್ಟೆ, "ನೀವು ವಕೀಲೀ ಬಿಟ್ಟರೇನೇ ನಿಂ ಜೋಡಿ ಮನೀಗೆ ಬರ್ತೀನಿ" ಅಂತ.

ಜಯರಾಯ:-(ಆ ಕಾಲದ ಅನುಭವದಲ್ಲಿಯೆ ಮಗ್ನನಾದವನಂತೆ) ನಾನು ವಕೀಲಿ ಬಿಡಲಿಲ್ಲಾ ಅಂದ್ರ---

ರಂಗಮ್ಮ:-ಅವನ ಜೋಡೀನೆ ಹೋಗ್ಬಿಡತಿದ್ದೆ ಅದು ಎಲ್ಲಿಯೊ ಒಂದು

ಆಶ್ರಮ ಇತ್ತಂತ.

ಜಯರಾಯ:-(ಉಸಿರೆಳೆದು) ಆದರೆ, ನಾವು ಮಾತ್ರ ಆತನ ಮಾತನ್ನು ನಡೆಸಲಿಲ್ಲ. ಹೋಗಲಿ, ಆ ಮಹಾತ್ಮ ಇನ್ನೂ ಕ್ಷೇಮದಿಂದ ಇದ್ದಾರ ಅನ್ನೋದೇ ಮುಖ್ಯ.

ರಂಗಮ್ಮ:-ಇರಲಿ, ಒಳಗೆ ನಡೀರಲ್ಲ? ನಾ ಏನಾಯ್ತೊ ಅಂತ ಹೆದರಿಕೊಂಡು ಬಂದೆ.

ಜಯರಾಯ:-ಬಂದೆ-ನಡಿ. (ರಂಗಮ್ಮನು ಹೋಗುವಳು.) ಗೋವಿಂದಪ್ಪಾ, ನಿನಗ ತಡ ಆಯ್ತು, ನೀನೂ ಇಲ್ಲಿಯೇ ಊಟಾ ಮಾಡಿಬಿಡು. ಸಂತೋಷದ ಸುದ್ದಿ ಕೇಳಿದ್ದಕ್ಕ ಸಹಭೋಜನದ ಸಮಾರಾಧನೆ ಆಗಲಿ. ನಡಿ. ನಡಿ. (ಗೋವಿಂದಪ್ಪನನ್ನು ಮುಂದೆ ಮಾಡಿಕೊಂಡು ಒಳಗೆ ಹೋಗುವರು.)

ವೆಂಕಣ್ಣ:-ರಾಯರ ಹೃದಯ ಭಾರೀ sentimental! ಅಲ್ಲ! ಮಹಾತ್ಮಾಜಿ ಅಂದ್ರ ಭಾವನಾ ಪರವಶರಾಗಿ ಮೈಮರೆತುಬಿಡತಾರ! ಅಂ?

ಶಾಮ:-(ಈ ಬಗ್ಗೆ ಮಾತನಾಡುವ ಮನಸ್ಸಿಲ್ಲದೆ) ಹುಂ-ಇರಲಿ—ನಡೆ ಊಟಕ್ಕೆ ಹೋಗೋಣ.

ವೆಂಕಣ್ಣ:-(ಕೋಟನ್ನು ತೆಗೆಯುತ್ತ ಅರ್ಧ ತನ್ನಷ್ಟಕ್ಕೆ ಎಂಬಂತೆ) ಆದರೂ ರಾಜಕಾರಣದೊಳಗ ಇಷ್ಟು ಭಾವನಾಪರವಶ ಆಗೋದು ಒಳಿತೇನು ಅಂತ---

ಶಾಮ:-(ನಡುವೆಯೆ) ನಿನಗೇನು ಮಾಡೋದು? ಕಂಡದ್ದನ್ನು ಕಂಡ ಹಾಂಗ ಭಾಷಿಸೋದು ನಿನ್ನ ಕೆಲಸ---ಹುಂ-ಸಾಕು-ನಡೆ.

ವೆಂಕಣ್ಣ:-(ಕೋಟನ್ನು ಸೋಫಾದ ಮೇಲಿಟ್ಟು) ಏನೋ ಅಪ! ದೇವರು ಬುದ್ಧಿನೂ ಕೊಟ್ಟಾನ, ಭಾವನಾನೂ ಕೊಟ್ಟಾನ, ಆದರೆ—

ಶಾಮ:-(ನಡುವೆಯು) ಬುದ್ಧಿ ಇದ್ದದ್ದು ಸುಖ ಗಳಿಸಿ ಸಾಯಲಿಕ್ಕೆ, ಭಾವನಾ ಇದದ್ದು ದುಃಖ ಅನುಭವಿಸಿ ಅಮರ ಆಗಲಿಕ್ಕೆ.

ವೆಂಕಣ್ಣ:-(ಹೊರಟವನು ತಿರುಗಿ ನಿಂತು ಬೆರಗಾಗಿ) ಏನಂದಿ?

ಶಾಮ:-(ಹುಸಿನಗೆಯಿಂದ) ಒಂದು ಅಶೋಕ ಚಕ್ರ ಇನ್ನೊಂದು

ಶೋಕಚಕ್ರ—(ಎನ್ನುತ್ತ ಅವನನ್ನು ನೂಕಿಕೊಂಡು ಹೋಗುವನು.)

[ಒಂದು ನಿಮಿಷ ರಂಗಭೂಮಿ ಯಾರೂ ಇಲ್ಲದೆ ನಿಃಶಬ್ದವಾಗಿರಬೇಕು. ಆಮೇಲೆ ದೂರದಿಂದ ಎರಡು ಸಲ ಗೂಗೆಯ ಘೂತ್ಕಾರ ಕೇಳಬರುವದು. ಕೂಡಲೆ ರಂಗಭೂಮಿಯಲ್ಲಿ ಕತ್ತಲೆ ಪಸರಿಸುವದು. ಜೊತೆಗೆ–]

(ತೆರೆ)

## ಎರಡನೆಯ ಅಂಕ ಮುಗಿದುದು.

## ಅಂಕ ೩

**ರಂಗ ರಚನೆಯ ಬಗ್ಗೆ ಸೂಚನೆ:-** ಈ ಅಂಕದ ಸಂನ್ನಿವೇಶವನ್ನು ರಂಗಭೂಮಿಯ ಮೇಲೆ ತೋರಿಸುವಾಗ ಒಂದೆರಡು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು. ರಂಗಸ್ಥಲದ ಮೇಲೆ ಯಾವ ಸಲಕರಣೆಯೂ ಇರುವದಿಲ್ಲ. ಮುಂದೆ ಮುಖ್ಯದೃಶ್ಯ ಪ್ರಾರಂಭವಾದಾಗ ಇಡಿಯ ರಂಗಸ್ಥಲವು ಮನೆಯ ಮಾಳಿಗೆಯಾಗಿದೆ ಎಂದು ಸೂಚಿಸುವಂತೆ ಸಜ್ಜಾಗಿರಬೇಕು. ಹಿಂದಿನ ಅಂಕದಲ್ಲಿ ಎದುರಿಗಿದ್ದ ಪಾವಟಿಗೆಗಳನ್ನೆ ಈಗ ಮಾಳಿಗೆಗೆ ಬರುವ ಪಾವಟಿಗೆಗಳೆಂದು ಉಪಯೋಗಿಸಬಹುದು. ಆದರೆ ಗೋಡೆ-ಕಿಟಕಿ-ಬಾಗಿಲು ಯಾವುದೂ ಇಲ್ಲ. ಮೂರೂ ಕಡೆ ಕಂಬಿಗೋಡೆಯನ್ನಾಗಲಿ, ರಂಗದ ನಟ್ಟನಡುವೆ ಬೆಳಕಿಂಡಿಯನ್ನಾಗಲಿ ಸಂನಿವೇಶಿಸಿ ಪ್ರಾರಂದಭಲ್ಲಿಯೆ ಇದು ಮಾಳಿಗೆ ಎಂದು ಪ್ರೇಕ್ಷಕರ ಲಕ್ಷ್ಯಕ್ಕೆ ತರತಕ್ಕದ್ದು-ಇದಾಯಿತು, ಮುಖ್ಯ ದೃಶ್ಯದ ಪ್ರಯೋಗದ ಬಗ್ಗೆ. ಆದರೆ ಅಂಕ ಪ್ರಾರಂಭವಾದಾಗ ಮಾತ್ರ ರಂಗಸ್ಥಳವಲ್ಲಿ ಬೆಳಕನ್ನೇ ತೋರಿಸತಕ್ಕದ್ದಲ್ಲ. ಅದರ ಬದಲಾಗಿ ಮಾತಾಡುವ ಎರಡೆರಡು ವ್ಯಕ್ತಿಗಳ ಮಟ್ಟಿಗೆ ಮಾತ್ರ ಆಗಾಗ ಬೆಳಕನ್ನು ಬಿಡುತ್ತಿರಬೇಕು. (ಇದನ್ನು ಅಲ್ಲಲ್ಲಿ ಸೂಚಿಸಿದೆ.) ಯಾರಿಗೆ ಈ ರೀತಿ ಪ್ರಯೋಗಿಸಲು ವಿದ್ಯುದ್ದೀಪಗಳ ಸಹಾಯವಿಲ್ಲವೊ ಅವರು ಈ ಭಾಗವನ್ನು—ಎಂದರೆ ರಂಗಸ್ಥಲದಲ್ಲಿ ಪೂರ್ತಿ ಬೆಳಕನ್ನು ತೋರಿಸುವವರೆಗಿನದನ್ನು—ಪ್ರತ್ಯೇಕ ದೃಶ್ಯವಾಗಿ ತೋರಿಸಬಹುದು. ಮೊದಲ ಭಾಗವನ್ನು ಯಾವ ರೀತಿಯಲ್ಲಿ

ಪ್ರದರ್ಶಿಸಿದರೂ ಅಲ್ಲಿ ಪಾತ್ರಗಳು ಹೆಚ್ಚಾಗಿ ಕಳ್ಳದನಿಯಲ್ಲಿ ಮತ್ತು ಆವೇಶದ ಅವಸರದಲ್ಲಿ ತಮ್ಮ ಮಾತುಗಳನ್ನು ನುಡಿಯತಕ್ಕದ್ದು.

* * * *

(ರಂಗಸ್ಥಲದಲ್ಲಿ ಪೂರ್ತಿಯಾಗಿ ಕತ್ತಲೆ ಇದೆ. ಪ್ರಾರಂಭಕ್ಕೆ ಮಾತುಗಳಷ್ಟೆ ಕೇಳುವುದಲ್ಲದೆ ಪಾತ್ರಗಳು ಕಾಣುವಂತಿಲ್ಲ. ಅಲ್ಲಲ್ಲಿ ಕಂಸದಲ್ಲಿ "ಬೆಳಕು" ಎಂದು ಹೇಳಿದಾಗ ಒಂದು ನಿಮಿಷ ಮಾತ್ರ ಪಾತ್ರಗಳ ಮುಖಗಳ ಮೇಲಿಷ್ಟೆ ಬೆಳಕನ್ನು ಕೆಡವಿ ಮತ್ತೆ ಕತ್ತಲನ್ನು ಮಾಡಬೇಕು. ದೃಶ್ಯವು ಇನ್ನಿಷ್ಟು ಪರಿಣಾಮ-ಕಾರಕವಾಗಲು ಆ ಪಾತ್ರಗಳ ಜೋಡಿಯು ರಂಗಸ್ಥಲದ ಬೇರೆಬೇರೆ ಭಾಗಗಳಲ್ಲಿ ನಿಂತು ತಮ್ಮ ಸಂಭಾಷಣೆಯನ್ನು ನಡೆಸಬೇಕು. ತೆರೆ ಮೇಲೆದ್ದೊಡನೆಯೆ "ನನ್ನ ಮಾತು ಕೇಳಾದರೂ ಕೇಳು" "ಕೇಳೋದು ಸಾಕು, ನೋಡೋದು ಸಾಕು" ಎಂದು ಮುಂತಾಗಿ ಹನ್ಮಂತಪ್ಪನ ಮತ್ತು ಭೀಮಣ್ಣನ ದನಿಗಳು ಕೇಳ ಬರುವವು)

ಹನ್ಮಂತಪ್ಪ:-ಏ, ಭೀಮಣ್ಣಾ, ನನ್ನ ಮಾತನಾದರೂ ಕೇಳಂತೀನಿ.

ಭೀಮಣ್ಣ:-(ಸಿಡುಕಿನ ದನಿಯಲ್ಲಿ) ಏನ ಕೇಳೋದದು? ಅಲ್ಲೊ, ಹನ್ಮಂತಪ್ಪಾ, ನೀನೇ ನೋಡಿದಿಯಲ್ಲ, ನಿನ್ನಿನ ದಿನ? ಅಲ್ಲ, ದಿನ ಬೆಳಗೂ ಕರೆಯೋದು ಶಕ್ಯ ಇಲ್ಲ, ಅವರು ಬರೋದೂ ಶಕ್ಯ ಇಲ್ಲ, ಅದಕ್ಕ ಎಂದಿಲ್ಲೊ ನಮ್ಮ ಮಾರ್ಕೆಟದ ಅಡಿಗಲ್ಲು ಕೊಡಿಸೋದು, ಒಬ್ಬ ಮಂತ್ರೀನ್ನ ಕರಿಯೋಣ ಅಂದರ— (ತೀರ ನಗೆಗೇಡು ಎಂದು ಸೂಚಿಸುವ ದನಿಯಲ್ಲಿ) ಅಲ್ಲಪ, ಯಾರನ ಕರಿಯೋದು? ಬಾಗವಾನರ ಬಾಬು ಅಂತ! ಸಾಲೆಗೆ ಹೋಗಿದ್ರ ಮುಂದ ಅಪ್ಪನ ಹೆಸರು ಹಚ್ಚಿತಿವನೀ, ಅಪ್ಪನದೋ ಗೊತ್ತಿಲ್ಲ—ಅಂಥಾ ಎಲ್ಲಿದೋ ಒಂದು ಮುದುಕನ್ನ! ಇದನ್ನ ಕಣ್ಮುಟ್ಟ ನೀನೇ ನೋಡೀದಿ— ಮತ್ತ ನಿನ್ನ ಮಾತ ಕೇಳ ಅಂತೀಯಲ್ಲ?

ಹನ್ಮಂತಪ್ಪ:-ನೀನೂ ರಾಮಣ್ಣನ ಹಾಂಗೇ ಮಾತಾಡತೀಯಲ್ಲೊ? ಏನೋ ನೀನು ವಿಚಾರಮಾಡಿ ಮಾತಾಡುವವ ಅಂತ ತಿಳಿದಿದ್ದೆ.

ಭೀಮಣ್ಣ:-(ಹಂಗಿಸುವ ದನಿಯಲ್ಲಿ) ವಿಚಾರ? ವಿಚಾರ ಮಾಡ್ಲಿಕ್ಕೆ ಕೊಡತಾರ ಯಾರು? ಅಲ್ಲಿ ಸಭಾಕ್ಕ ಹೋಗೋದರಾಗ ಹಜರೇ—ನಿಮ್ಮ ಜಯರಾಯ ತನ್ನದೊಂದು ವಿಚಾರ ಕಟ್ಟಿಕೊಂಡು!

ಹನ್ಮಂತಪ್ಪ:-ಹೋಗಲಿಬಿಡೋ! ಮೂಲೆಗಲ್ಲು ಕೂಡಿಸೋದೇನು? ಗೌಂಡೀನೂ ಕೂಡಸ್ತಾನ. ಅದಕೇನೂ ಮಂತ್ರಿ ಬೇಕಾಗಿಲ್ಲಲ್ಲ. ಅದನ್ನ ಕಟ್ಟಿಸಿದ ಮ್ಯಾಲೆ ಉದ್ಘಾಟನಕ್ಕೆ ಮಂತ್ರೀನ್ನ ಕರಿಸಿದರಾತು.—

ಭೀಮಣ್ಣ:-(ಬೆರಗಾಗಿ) "ಕಟ್ಟಿಸಿದ ಮ್ಯಾಲೆ" ಅಂದ್ರ? ಇನ್ನೇನು, ಖರೇನೇ ಮಾರಕೇಟ ಕಟ್ಟಿಸೋವರೋ ಏನು ನೀವು?

ಹನ್ಮಂತಪ್ಪ:-"ಖರೇನೆ" ಅಂದ್ರ?

ಭೀಮಣ್ಣ:-ಅಂದ್ರೇನಂದ್ರ? ಅಲ್ಲಪ, ಇದೇನೊ ಒಂದು ಮುದುಕನ ಹುಚ್ಚು ಅದ, ಹೋಗವಲ್ದ್ಯಾಕ ಅಂತ ಕೈ ಎತ್ತೀವಿ ನಾವು. ಹಂಗ ಖರೇನೇ ಕಟ್ಟಿಸೋದಿದ್ರ ಅದರ ಕಂತ್ರಾಟ ಯಾರಿಗೆ ಕೊಡೋದು—ಏನ್ಮಾಡೋದು ಇದನ್ನೆಲ್ಲ ನೋಡಿಕೊಂಡು—..

ಹನ್ಮಂತಪ್ಪ:-(ನಡುವೆಯೆ) ಅದ್ಕೇ ಹೇಳತೀನಲ್ಲ, ನೀ ಸಭಾಕ್ಕ ಬರಬೇಕೂ ಅಂತ! ನೀವೆಲ್ಲಾ ಸಿಟ್ಟಿಗೆದ್ದು ಸಭಾಕ್ಕ ಬರೋದು ಬಿಟ್ಟರೆ ತನಗೆ ಬೇಕಾದವರಿಗೆ ಅವ ಕೊಟ್ಟಗೋತಾನ. ಹೌದಂತಿಯೋ, ಇಲ್ಲೊ?

ಭೀಮಣ್ಣ:-ಏ ಹನ್ಮಂತಪ್ಪಾ, ಈ ಮುನಸಿಪಾಲ್ಟಿ ಭಾನಗಡೀನೇ ಬ್ಯಾಡ ನನಗ. ಏನೋ ನೀವೆಲ್ಲಾ ನಾಕ ಮಂದಿ—ನಮ್ಮವರು—ಇದ್ದೀರಿ ಅಂತ ಬಂದೆ ನಾ.(ಬೆಳಕು)

ಹನ್ಮಂತಪ್ಪ:-(ನಗೆಯಿಂದ) ನೀ ಸಭಾಕ್ಕೇ ಬರದಿದ್ದರೆ ನಮ್ಮವರಿಗೇನು ಉಪಯೋಗ?

ಭೀಮಣ್ಣ:-ಅಂದರ? ಮಂದಿಗೆ ಉಪಯೋಗ ಬೀಳೋದಾದ್ರ ಮುನಸಿಪಾಲ್ಟಿಗೆ ಯಾಕೆ ಬರ್ತಿದ್ದೆ? ನನ್ನ ಅಂಗಡಿ ಅದ, ಬೇಕಾದ ಸಾಮಾನೂ ಅವ. ಅಂಗಡೀವಳಗ ಕೂತು ಕೂತು ಬ್ಯಾಸರ ಆಗಿರತದ, ಮಂದಿಗೂ ಆತೂ ನನಗೂ ಆತೂ ಅಂದ ಮೆಂಬರ ಆದರ—ಇವನೋಡು ಇಲ್ಲದ ಕಿಟಿಕಿಟಿ! ಈವತ್ತ ಮುಂಜಿಗೆ ಏನ ಹೇಳ್ತಿದ್ದ ಗೊತ್ತ ಅದ ಏನು? ಊರೊಳಗಿನ ಎಲ್ಲಾ ಓಣಿಗಳ ನಡುವ ಇನಾಮು ಇಡುವವ ಅಂತ (ತಿರಸ್ಕಾರದ ನಗೆ)

ಯಾರು ಎಲ್ಲಾರಕಿಂತ ತಂ ಓಣಿ ಸ್ವಚ್ಛ ಇಡತಾರ ಅವರಿಗೆ ಇನಾಮು ಅಂತೆ! ಹಃ, ಅದನ್ನ ಭಂಗೀ ಅವರ ಕಡಿಂದ ಕೊಡಿಸುವವನೊ ಏನೋ!

ಹನ್ಮಂತಪ್ಪ:-ಭೀಮಣ್ಣಾ, ಈಗೊಮ್ಮೆ ನಂ ಕೈ ಸಿಕ್ಕದ, ಎಷ್ಟು ಜಗ್ಗತಾನ ಜಗ್ಗಲಿ. ಇನ್ನ ಸುಮ್ನ ಸುಮ್ಮನೆ ಜಗಳಾಡಿದರೆ ನಮ್ದು ಅಸಹ್ಯ.—

ಭೀಮಣ್ಣ:-(ನಡುವೆಯೆ) ಹಂ, ಅದ್ಕೇ ಅಲ್ಲೇನು? ನಾವೆಲ್ಲ ನಿನ್ನೆ ಕೈ ಎತ್ತಿದ್ದು. ಅದೇ ಹೇಳ್ತೀನಿ, ಈ ವಣ ಕಿರಿಕಿರೀನೂ ಬ್ಯಾಡಾ, ನಾವು ಸಭಾದಾಗ ಹಜರ ಇರೂದೂ ಬ್ಯಾಡ—

ಹನ್ಮಂತಪ್ಪ:-ಎಲೆ ನಿನ! ಮತ್ತ ಅದನ್ನೆ—

ಭೀಮಣ್ಣ:-(ನಡುವೆಯೆ) ಹೊತ್ತಾಯ್ತು, ಅಂಗಡೀ ಮುಚ್ಚಲಿಕ್ಕಾದರೂ ಹೋಗೋಣ. ಇಲ್ಲಿ ನೋಡು. ರಾಮಣ್ಣಗ ಹೇಳು, ನಂ ಸೆಕ್ರೆಟರಿಗೆ ಕೇಳು—ಅವರು ಹ್ಯಾಂಗ ಹೇಳ್ತಾರ ನಂದೂ ಹಾಂಗೇ ಅಂತ ತಿಳಿ. (ಆವೇಶದ ದನಿಯಲ್ಲಿ) ಭಾಳದಿನಾ ಮಾತ್ರ ಇದನ್ನ ನಡಿಗೊಡಲಿಕ್ಕಿಲ್ಲ, ಹೇಳಿರತೀನಿ ನೋಡು.

ಹನ್ಮಂತಪ್ಪ:-ನಾಳೆ ಕೂಡೋಣ ಹಾಂಗಾದ್ರ?

ಭೀಮಣ್ಣ:-(ಹೊರಡುತ್ತ) ನಾಳೆ ನೀ ಸೆಕ್ರೆಟರಿಗಂತೂ ಭೆಟ್ಟಿ ಆಗು.—

[ದನಿಗಳು ದೂರ ಹೋಗಿ ಕೇಳದಂತಾಗುವವು.]

[ಒಂದು ನಿಮಿಷ ಕಳೆದ ತರುವಾಯ–ರಂಗಸ್ಥಲದ ಇನ್ನೊಂದು ಭಾಗದಿಂದ ಮತ್ತೆ ಎರಡು ದನಿಗಳು ಕೇಳಬರುವವು, "ತೊಗೊಂಬಿಡು, ಒಗೀತೀನಿ ಮೋರೀ ಮ್ಯಾಲೆ'', ''ಹುಚ್ಚ ಇದ್ದೀಯೊ ನೀನು''? ಮುಂತಾಗಿ ಸೆಕ್ರೆಟರಿ ಮತ್ತು ಹನ್ಮಂತಪ್ಪನ ದನಿಗಳು]

ಸೆಕ್ರೆಟರಿ:-ಹೇಳಿದೆನಲ್ಲ, ನಿನ್ನ ಮೋರೀಮ್ಯಾಲ ಒಗೀತೀನಿ, ತಗೊಂಬಿಡು.

ಹನ್ಮಂತಪ್ಪ:-ಹುಚ್ಚ ಇದ್ದೀಯೋ ನೀನೂ! ಅಲ್ಲ ಪಾರ್ಟಿಗೆ ಸೆಕ್ರೆಟರಿ

ಆಗೀದೇನೂ? ಹೀಂಗ ಮಾತೇನು ಆಡ್ತಿ?

ಸೆಕ್ರೆಟರಿ:-(ಸೋಗಿನ ಆಶ್ಚರ್ಯದಿಂದ) ಪಾರ್ಟಿ? ಎಲ್ಲಿ ಅದ ಪಾರ್ಟಿ? ನಾ ನಿನಗ ಮುಂಚಿನಿಂದೇ ಹೇಳ್ತಿದ್ದೆನಿಲ್ಲೊ, ಹನ್ಮಂತಪ್ಪಾ, ಈ ಮಿಕನ್ನ ನಮ್ಮೊಳಗ ಸೇರಿಸಿಕೋಬ್ಯಾಡ ಅಂತ? ಪಾರ್ಟಿ ಅಂತ ಪಾರ್ಟಿ! ಉಳಿದದೇನು ಹಾಳ ಪರಟಿ? (ತಿರಸ್ಕಾರದ ನಗೆ) ಹಃ—ಈ ಹುಚ್ಚುಗೊಟ್ಟೀ ಆಟಾನ ಬ್ಯಾಡ (ಬೆಳಕು) ಇಕ! ಇದು ನನ್ನ ರಾಜೀನಾಮೆ. ನೀ ಏನೋ ನಿನ್ನ ಮ್ಯುನಸಿಪಾಲ್ಟಿ ಏನೋ?,

ಹನ್ಮಂತಪ್ಪ:-(ಸಿಡುಕಿನ ದನಿಯಲ್ಲಿ) ನನಗೇನ ರಾಜೀನಾಮೆ ಕೊಡಲಿಕ್ಕೆ ಬರೋದಿಲ್ಲ ಅಂತ ತಿಳಿದೀ ಏನು? ನಾನೂ ಬರೆಯಿಸತೀನಿ, ಕೆಳಗ ಸಹಿ ಇಕ್ತೀನಿ. "ಇಕ ರಾಜೀನಾಮೆ" ಅಂತೀನಿ. ಏನು ದೊಡ್ಡ ಕೆಲಸ ಮಾಡಿಧಾಂಗ ಆತು?

ಸೆಕ್ರೆಟರಿ:-(ಅಣಕಿನ ದನಿಯಲ್ಲಿ) ಇಲ್ಲಪ! ಆ ಮುದಕನ ಕಚ್ಚೀ ಚುಂಗಕ್ಕ ಮುಳ್ಳ ಕಂಟೀ ಹಾಂಗ ಜೋತು ಬೀಳೋದು ಭಾಳ ದೊಡ ಕೆಲಸ! ಅಂದ್ರ ಭಿರ್ ಅಂತ ಬಿಸಾಡಿ ಬಿಡ್ತಾನ ನಿಮ್ಮನ್ನ! ನಾ ನಿನಗ ಎಂದಿನಿಂದ ಹೇಳಿಲ್ಲ, ಹನ್ಮಂತಪ್ಪಾ, ಕೆಲಸಕ್ಕ ನಾವು ... ಮರ್ಯಾದೆಗೆ ಮತ್ತೊಬ್ಬರು....ಆದರೆ ನಡೆಯೋದಿಲ್ಲ ಅಂತ?

ಹನ್ಮಂತಪ್ಪ:-(ಹುಸಿನಗೆಯಿಂದ) ಏನ ಹುಡಗಬುದ್ಧಿ ನಿಂದೂ ಅಂತೀನಿ. ಅಲ್ಲೊ, ಆ ಮುದುಕಗ ಮರ್ಯಾದೆ ಅಂತ ತಿಳೀತಿರಲ್ಲ? ತಡಿಯೊ! ನನಗೊತ್ತದ, ಕಂಡವರು ಕಂಡಲ್ಲಿ ಕೈ ಮುಗೀತಾರ, ಅಂತ ಹೇಳತಿ ಹೌದಲ್ಲೊ? ಥೂ—ನಿನ! ಅದು ಮ್ಯಾಲ ಏರಿಸೊ ಮರ್ಯಾದೆ ಅಲ್ಲ, ಒಳಗ ಕುದಿಯೊ ಅಂಜಿಕೆ.

ಸೆಕ್ರೆಟರಿ:-(ಚಕಿತನಾಗಿ)ಅಂಜಿಕಿ!

ಹನ್ಮಂತಪ್ಪ:-ಹಂ—ಅಂಜಿಕಿ, ಅಂದೆ (ಬೆಳಕು) ಹಹ! ದೊಡ್ಡವರಾಗ್ಬೇಕು ಅನ್ನೋರ್ನ್ರ ಹಣೇಬರಹಾನೇ ಇದೂ. ಇವರ ಬುದ್ಧಿ, ಇವರ ಶಕ್ತಿ, ಇವರ ಹಟ—ಇವನ್ನೆಲ್ಲಾ ನೋಡಿ, ಮಂದಿ ಗಾಬರಿ ಆಗ್ತಾರ ಏನಪ, ಇಂಥಾವ ಯಾವಾಗ ಏನ್ಮಾಡ್ತ್ಯಾನು ಖಾತ್ರಿ ಇಲ್ಲ, ಅಂತ. ಅದ್ಕೆ

ದೂರಿಂದಲೇ ಕೈ ಮುಗೀತಾರ—

ಸೆಕ್ರೆಟರಿ:-(ಪೆಚ್ಚಾದ ದನಿಯಲ್ಲಿ) ಹನ್ಮಂತಪ್ಪಾ, ನೀ ಏನಂತೀ ಏನೊ! ನಂದು ಗೊತ್ತದ ಅಲ್ಲ ನಿನಗ? ನಾವ್ಯಾಕ ಬಡಕೋತೇವಿ? ನಮಗೇನು ಬೇಕಾಗೇದ? ಹತ್ತು ವರ್ಷ ಆಯ್ತು ಇಂದಿಗೆ, ಎಲ್ಲಿ ಹನ್ಮಂತಪ್ಪ ಅಲ್ಲಿ ನಾವೂ ಅವನ ಹಿಂದೆ—

ಹನ್ಮಂತಪ್ಪ:-(ಸಂಕೋಚಭಾವದಿಂದ) ಅದನ್ಯಾರ ಇಲ್ಲಂದರು—

ಸೆಕ್ರೆಟರಿ:-(ನಡುವೆಯೆ) ಅಲ್ಲ—ಒಟ್ಟ ನಂ ಮನಸಿನಾಗಿನ ಮಾತು ಹೇಳ್ತೀನಿ. ಹನ್ಮಂತಪ್ಪ ಇನ್ನೂ ಮುಂದ್ಮುಂದ ಹೋಗ್ಬೇಕು, ಅಂದ್ರ ಅವನ ಹಿಂದ್ಹಿಂದ ನಡದ ನಮ್ಗೂ ಛಾನ್ಸ Chance ಸಿಕ್ಕೀತು ಅಂತ ಲೆಕ್ಕ ಹಾಕಿದರ—

ಹನ್ಮಂತಪ್ಪ:- ಇಲ್ಲ ಅಂತ ನಾ ಅಂದೆನೆ?

ಸೆಕ್ರೆಟರಿ:-ಅಲ್ಲ-ನಾವು ದುಡದದ್ದಕ್ಕ ನಂ ಮಂದಿಗೆ ಮರ್‍ಯಾದೆ ಮುಟ್ಟಲಿ ಅಂತಂದ್ರ—

ಹನ್ಮಂತಪ್ಪ:-(ತುಸು ಹಟದ ದನಿಯಲ್ಲಿ) ಈಗೇನಾಯ್ತು?

ಸೆಕ್ರೆಟರಿ:–ಏನಾಯ್ತು? ಏನಾಯ್ತು-ಅಂತೀಯಾ, ಹನ್ಮಂತಪ್ಪಾ? ಒಂದೊಂದು ಮಾತ ನೆನಪಾದರೆ-ಬರೀ ನೆನಪಾದರೇನೇ–ಹೊಟ್ಯಾಗ ಬೆಂಕಿ ಬೀಳ್ತದ, ಬೆಂಕಿ. ಅಲ್ಲ, ಈವತ್ತ ಸಂಜಿಗೆ ಅಲ್ಲೆ ಕೂತು ಕಿವಿಮುಟ್ಟ ಕೇಳೀದಿ ನೀನೂ, ಮತ್ತೆ ಏನಾಯ್ತು ಅಂತೀಯಲ್ಲ? (ತುಸು ಆವೇಶದಿಂದ) ಇನ್ನೂ ಏನಾಗ್ಬೇಕಂತಿ?

ಹನ್ಮಂತಪ್ಪ:-(ತುಸು ಹಟದ ದನಿಯಲ್ಲಿ) ಅಲ್ಲೊ, ಹೀಂಗೇ ಎಷ್ಟು ದಿನ ನಡೆದೀತು?

ಸೆಕ್ರೆಟರಿ:-(ಬೆಳಕು) ಎಷ್ಟು ದಿನ? ಎಷ್ಟು ದಿನಾನs? ಸೋತದ್ದು ತಿಳೀಲಾರದಷ್ಟು ನಾಚಿಕೇಡಿ ಇದ್ದಾನ ಮುದುಕ, ದಿನದ ಲೆಕ್ಕಾ ಹಾಕತೀಯಾ ಅವನ ಮುಂದ? ಇಃ! ಅವನ್ದು ಎಷ್ಟೇ ದಿನ ನಡೀಲಿ, ನಮಗ ಮಾತ್ರ ಇನ್ನ ತಡೆಯುದು, ಇದೇ ಕಡೀ ಮಾತು. (ಹೊರಡುವನು.)

ಹನ್ಮಂತಪ್ಪ:- ಏ, ಇಕ!, ಇಲ್ಲಿ ಕೇಳು—(ದನಿ ದೂರ ದೂರ ಸಾಗುವದು.)

ಸೆಕ್ರೆಟರಿ -(ಅವಕ್ಕೂ ದೂರ ದೂರ ಸಾಗಿದ ದನಿಯಲ್ಲಿ) ಕಡೇ ಮಾತು, ಕಡೇಮಾತು ಅಂದೆನಲ್ಲ? (ದನಿ ದೂರ ಸಾಗುತ್ತ ಕೇಳದಂತಾಗುವದು.)

ಹನ್ಮಂತಪ್ಪ:-ಇವನೂ ಹೋದ—ಅವನೂ ಹೋದ—ಒಬ್ಬೊಬ್ಬರೆ ಕೈ ಬಿಟ್ಟರು—ಇನ್ನೂ ಬಿಡ್ತಾನೇ ಇದ್ದಾರ—ಯಾಕೆ?—(ಹಲ್ಲು ಕಚ್ಚಿರುವ ನೆಂಬಂತೆ) ಒಟ್ಟ ಆ ಜಯರಾಯನ ಸಲುವಾಗಿ !—ಹುಂ—(ನಿರ್ಧಾರದ ದನಿಯಲ್ಲಿ) ಏನಾದರೂ ಮಾಡಲಿಕ್ಕೇ ಬೇಕು—ಸಂಭಾವಿತ ಮುದುಕ ಅಂದ್ರ ಇವನ ಸಂಭಾವಿತಗಿರೀನೇ ನಂ ಕುತ್ತಿಗ್ಗೆ ಕೈ ಹಾಕಿತಲ್ಲ!---ಇವ ಇರೋತನಕ ಇನ್ನೊಬ್ಬರಿಗೆ ಕೆಲಸ ಮಾಡಗೊಡೋದಿಲ್ಲ, ಇವ ಮುಂದಾದರ---(ಜೊಟ್ಟಿಯುರಿಯ ನಗೆ) ಮುಗಿದೇ ಹೋಯಿತು ! ಇವ ಹೇಳಿಧಾಂಗ ಕೇಳಬೇಕು, ಇಲ್ಲದಿದ್ದರ ನಾವು ಸಂಭಾವಿತರು ಅಂತ ಅನ್ನಿಸಿಕೊಳ್ಳೋ ಹಾಂಗಿಲ್ಲ!—. ಛೇ ಏನಾದ್ರೂ ಮಾಡ್ಲಿಕ್ಕೇಬೇಕು, ಇವನ್ನ ಪಾರ್ಟಿಯಿಂದ ಹೊರಗ ಹಾಕಬೇಕು. ನಾಳಿನ ಉತ್ಸವ ಯಶಸ್ವಿ ಆಯಿತು ಅಂದ್ರಂತೂ ನಮ್ಮ ಮುಖ ಎತ್ತೋ ಹಾಂಗಿಲ್ಲ, ನಾಳಿನ ಉತ್ಸವ---

ಶೀನಪ್ಪ:-(ಬೆಳಕು) ಉತ್ಸವ ನಾಳೆ ಅಲ್ಲ, ನಾಡದು. ಹನ್ಮಂತಪ್ಪಾ, ಆ ಉತ್ಸವ ಪೂರಾ ಯಶಸ್ವಿಯಾಗತದ ನೋಡು–

ಹನ್ಮಂತಪ್ಪ:-ಆಂ? ಏನಂದಿ? ಶೀನಪ್ಪಾ?

ಶೀನಪ್ಪ: ಉತ್ಸವ ಯಶಸ್ವಿ ಆಗತದ ಅಂದೆ. ನಾ ನಿನಗ ಮೊದಲೇ ಹೇಳಿದ್ದಿಲ್ಲ, ಆ ಮುದುಕನ ಮುಂದ ನಿನ್ನ ಆಟ ನಡೆಯೋದಿಲ್ಲ ಅಂತ? ಈಗೇನಾಗೇದ ಗೊತ್ತದ ಏನು? ತಮ್ಮ ಪೈಕೀನೇ ಒಬ್ಬ ಅಡಿಗಲ್ಲು ಕೊಡಿಸೋವವ ಅನ್ನೂ ಹುರುಪಿನಿಂದ ಬಾಗವಾನರು, ಪಲ್ಲೆ ಮಾರುವವರು ಎಲ್ಲಾರೂ ಕೂಡಿ ಸ್ವಯಂ ಸೇವಕರಾಗಿ ಮಂಟಪ ಹಾಕಲಿಕ್ಕೆ ಹತ್ಯಾರ, ಅದರ ಸಿಂಗಾರ ನಡೆಸ್ಯಾರ, ಅದರ ಸಾರಣೆ ಮಾಡುವವರಿದ್ದಾರ—

ಹನ್ಮಂತಪ್ಪ:-ಅಂದ್ರೆ, ಬ್ಯಾಡ ಅಂತ ಹೇಳಿದ ನಮ್ಮ ಮುಖಕ್ಕ ಮಶೀ ಹತ್ತತದ ಅನ್ನು?

ಶೀನಪ್ಪ:-ನನಗನ್ನಿಸ್ತದ, ಮುಂದಿನ ಸಾರೆ ನಾವು ಆರಿಸಿ ಬರೋದು ಸುದ್ದಾ ಕಠಿಣ ಅಂತ.

ಹನ್ಮಂತಪ್ಪ:-ಹುಂ.

ಶೀನಪ್ಪ:-ರಾಮಣ್ಣಾ ಭಾರೀ ಸಿಟ್ಟಿಗೆ ಬಂದಾನ.

ಹನ್ಮಂತಪ್ಪ:-(ಉಸುರ್ಗರೆದು)ಹುಂ–

ರಾಮಣ್ಣ:-(ಒಮ್ಮೆಲೆ ಬಂದು) ಉಸರೇನ್ಬಿಡತೀ ಒದಿಸಿಕೊಂಡ ನಾಯಿ ಹಂಗ? ನಿನ್ನ ಕೈಯ್ಯಾಗ ಕಡ್ಡೀ-ಕಡ್ಡೀ ಕೊಟ್ಟ ಹೇಳಿದಿವಿ. "ನಿಂ ಜಯರಾಯ ದೊಡ್ಡ ಮನಶ್ಯಾ ಇರಬಹುದು, ಆದರ ಇದು ಪಾರ್ಟಿ ಮಾಡೋ ಕೆಲಸ, ಪಾರ್ಟಿವಳಗ ಅವ ಕೂಡಿಕೊಳ್ಳೂದಿಲ್ಲ, ಬ್ಯಾಡ ಬ್ಯಾಡ" ಅಂತ ಕಡ್ಡೀಕೊಟ್ಟು ಹೇಳಿದೆವೊ ಇಲ್ಲೊ? ಈಗ ನಿಂ ಊರ ಛಂದಾಗಿ ನಿಂ ಪಾರ್ಟಿ ಹಾಳಾದರ ಏನು ಬಂಧಾಂಗಾಯ್ತು? ಹತ್ತುವರ್ಷ ಹಣ್ಣ ಆದಿವಿ ಪಾರ್ಟಿ ಕಟ್ಟಲಿಕ್ಕೆ, ಹತ್ತುವರ್ಷ ಹಣ್ಣಾದಿವಿ ಜೇಲದಾಗ ಉಸಕ ಬೀಸಿ; ನಮಕಿಂತ ಇವಗೇನ ಬುದ್ಧಿ ಹೆಚ್ಚ ಅದನ? ವ್ಯಾಲಿ ಸಂಭಾವಿತ ಅಂತ? ಎಲೆ ನಿನ, ಅಷ್ಟ ಸಂಭಾವಿತ ಇದ್ದರಸ್ವರ್ಗದಾಗ ಇರಬೇಕು, ಇಲ್ಲಿ ಯಾಕ ನಂ ಎದೀವ್ಯಾಲ ಕಲ್ಲ ವಡೀತಾನ? ನಿನಗ್ಹೇಳ ತೇನಿ, ಹನ್ಮಂತಪ್ಪಾ, ಒಂದೇ ಈ ಜಯರಾಯರಂತಹರ ಆಟಾ ಸಾಧಿಸಿತೊ, ನಂ ನಿಮಗ ಈ ಜಗತ್ತಿನಾಗ ಜಾಗಾನೇ ಇಲ್ಲ ನೋಡು...ಅಲ್ಲ—ಇವ ಎಂಥಾ ಸಂಭಾವಿತ ಅಂತೀನಿ? ನಾಡದಿನ ಉತ್ಸವದ ಮಂಟಪದ ತಯಾರಿಗೆ ಅಂತ ಸಾವಿರ ರೂಪಾಯಿ ತೊಗೊಂಡು ಈಗ ಬಾಗವಾನರನ್ನ ಪುಕಟ ದುಡೀಲಿಕ್ಕೆ—

ಶೀನಪ್ಪ:-(ಚಕಿತನಾಗಿ) ಸಾವಿರ—?

ಹನ್ಮಂತಪ್ಪ:-(ಬೆರಗಾಗಿ) ರೂಪಾಯಿ ತಕ್ಕೊಂಡಿಲ್ಲೊ ಜಯರಾಯ?

ರಾಮಣ್ಣ:-(ನಕ್ಕು) ಥೂ ಹೋಗರ್ಯೋ ನಿಮು! ಇಷ್ಟರಾಗ ಈ ಸುದ್ದಿ ಹಬ್ಬಿಬಿಟ್ಟದ—

ಶೀನಪ್ಪ:-
ಹನ್ಮಂತಪ್ಪ:- } (ಕೂಡಿಯೆ) ಎಲ! ಸುಳ್ಳು! ಆ ಸುದ್ದಿ ಸುಳ್—

ರಾಮಣ್ಣ:-(ತ್ವೇಷದ ದನಿಯಲ್ಲಿ) ಸುದ್ದಿ ಸುಳ್ಳೋ ನೀವು ಮಳ್ಳೋ? ಅದು ಸುಳ್ಳು ಅಂತ ಗೊತ್ತಾಗೋದರೊಳಗ ನಂ ಕೆಲಸ ಸಾಧಿಸಿರತದ.

ಭೀಮಣ್ಣ:-(ಒಮ್ಮೆಲೆ ಬಂದು)ಏ—ಕೇಳೀರೇನು ಸುದ್ದಿ?—ಯಾರೊ ಹಬ್ಬಿಸಿ ಬಿಟ್ಟಾರ. ಜಯರಾಯ ಇನಾಮಿನ ಆಶಾ ಹಚ್ಚಿ ತಂ ಓಣಿಯೊಳಗಿನ ಗಟಾರ ಕಟ್ಟಿಸಿಕೋತಾನ ಅಂತ—?

ಸೆಕ್ರೆಟರಿ:-(ಒಮ್ಮೆಲೆ ಬಂದು) ಏ—ಕೇಳೀರೇನು?—ವಕೀಲಿ ಬಿಟ್ಟ ಜಯರಾಯ ಮುನಸೀಪಾಲಿಟಿಯಿಂದೇ ತನ್ನ ಮನೆ ಖರ್ಚ ಸಾಗಿಸ್ತಾನಂತ—

ಹನ್ಮಂತಪ್ಪ:-(ಹೌಹಾರಿದವನಂತೆ) ಏ--ಎಲ!—ಹಂಗಲ್ಲ—ಕೇಳರಿ, ನಾ ಹೇಳ್ತೀನಿ—

ರಾಮಣ್ಣ:-(ನಕ್ಕು) ನೀನೇ ಕೇಳು, ಇನ್ನು ನಿಂ ಜಯರಾಯ ಪದ ಹೇಳ್ತಾನ!

[ಕೂಡಲೆ ರಂಗಸ್ಥಳದಲ್ಲಿ ಕೆಳಗಿನಂತೆ ಹಿಮ್ಮೇಳದ ಹಾಡು ಕೇಳ ಬರುವದು "ರಘುಪತಿ ರಾಘವ ರಾಜಾರಾಮು। ಪತಿತಪಾವನ ಸೀತಾರಾಮು। ರಘುಪತಿ ರಾಘವ ರಾಜಾರಾಮು। ಪತಿತಪಾವನ ಸೀತಾರಾಮು॥

ಈ ದನಿಯು ಕ್ರಮೇಣ ಕೆಳಗಿಳಿಯುತ್ತ ಹೋದಂತೆ ರಂಗಸ್ಥಲದ ಮೇಲೆ ಪೂರ್ಣ ಬೆಳಕು ಬಿದ್ದು ಪ್ರಾರಂಭಕ್ಕೆ ಸೂಚಿಸಿದ ದೃಶ್ಯವು ಗೋಚರವಾಗುವದು. ಇದು ಜಯರಾಯರ ಮನೆಯ ಮಾಳಿಗೆ. ಮಧ್ಯರಾತ್ರಿಯ ಸಮಯ. ಗೋಚರವಾದ ಒಂದು ನಿಮಿಷದಲ್ಲಿ ರಂಗದ ಹಿಂತುದಿಯಿಂದ ಪಾವಟಿಗೆಗಳನ್ನು ಹತ್ತಿ ಗೋವಿಂದಪ್ಪನು ಬರುವನು. ಅವನ ಮುಖದಲ್ಲಿ ಉದ್ವಿಗ್ನ ಕಳೆಯಿದೆ. ದೂರದಿಂದ ಜನರ ಚೀತ್ಕಾರದ ಸದ್ದು ಕೇಳುವುದು. ಒಮ್ಮೆ ರಂಗದಿಂದ ದೂರದಲ್ಲಿ ಒಮ್ಮೆಲೆ ಕೆಂಪು ಪ್ರಕಾಶವು ಹೊಳೆದು ಅಡಗುವದು. ಅದನ್ನು ನೋಡಿ–]

ಗೋವಿಂದಪ್ಪ:-[ಗಾಬರಿಯ ದನಿಯಲ್ಲಿ] ರಂಗಮ್ಮಾ, (ಪಾವಟಿಗೆಗಳ

ಹತ್ತರ ಹೋಗಿ ಕೆಳಗೆ ನೋಡುತ್ತ) ರಂಗವ್ವಾ-ರಂಗವ್ವಾ. (ಓಡುತ್ತ ಬಂದು, ರಂಗದ ಮಧ್ಯದಲ್ಲಿರುವ ಬೆಳಕಿಂಡಿಯಿಂದ ಕೆಳಗೆ ನೋಡುತ್ತ) ರಂಗವ್ವಾ—ಲಗೂ ಬರ್ರಿ—ಲಗು! ಇಲ್ಲೆ, ವ್ಯಾಲೆ ಬರ್ರಿ -(ಎಂದು ಎದ್ದು ನಿಂತು ಸುತ್ತಲೂ ನೋಡುವನು)

ರಂಗವ್ವ:-(ಪಾವಟಿಗೆಗಳನ್ನು ಹತ್ತುತ್ತ ಮೆಲ್ಲಗೆ ಬಂದು) ಏನು, ಗೋವಿಂದಪ್ಪಾ, ಏನದು?

ಗೋವಿಂದಪ್ಪ;-(ಮಾತಿಲ್ಲದೆ ಆವಳನ್ನು ಮುಂದಕ್ಕೆ ಕರೆದು ಅವಳು ಸಮೀಪ್ಪ ಬಂದಾಗ ಒಂದು ಕಡೆ ಕೈ ಮಾಡಿ ತೋರಿಸುತ್ತ) ನೋಡಿದಿರಾ ಅಲ್ಲಿ?

ರಂಗವ್ವ:-(ನೋಡುತ್ತ) ಏನದು? ಎಲ್ಲಿಯೊ—(ಎಂದು ಮುಖ ತಿರುಗಿಸಿ ಗೋವಿಂದಪ್ಪನನ್ನು ದಿಟ್ಟಿಸಲು)

ಗೋವಿಂದಪ್ಪ:-(ತಲೆ ತೂಗುತ್ತ) ನನಗೂ ಅದೇ ಸಂಶಯ ಅದ.

ರಂಗವ್ವ:-ಆದರೆ—ಅದು—ಊರನಡುವೆ ಇರಲಿಕ್ಕೆ ಸರಿ, ಗೋವಿಂದಪ್ಪ?

ಗೋವಿಂದಪ್ಪ:-(ಒಮ್ಮೆಲೆ ಕಿವಿಗೊಟ್ಟು ಕೇಳಿದಂತೆ ಮಾಡಿ) ಕೇಳಿದಿರಾ, ಎಲ್ಲಿಯೊ ಜನರು ಚೀರಾಡೂ ಶಬ್ದ ನೂ—(ತಡೆದು) ನಿಮಗೂ ಕೇಳಿಸಿತಲ್ಲ?

ರಂಗವ್ವ:-(ಉಸುರ್ಗರೆದು) ಏನ್ನ ಡೆವದೊ ಏನೊ! ಇವರೂ ಇಷ್ಟು ಲಗೂನೆ ಮನೆಗೆ ಬಂದಿದ್ದರ---

ಗೋವಿಂದಪ್ಪ:-ಬಂದಾರು, ರಂಗವ್ವ.

ರಂಗವ್ವ:-ಇಂಥಾ ವ್ಯಾಳ್ಯಾ ಬಂದೀತು ಅಂತ ಯಾರಿಗೊ ಅನಿಸಿರಲಿಕ್ಕಿಲ್ಲ, ಗೋವಿಂದಪ್ಪನವರೆ.

ಗೋವಿಂದಪ್ಪ:-ಮನುಷ್ಯನವೆ ಆಯ್ತು, ದೇಶದ್ದೆ ಆಯ್ತು, ಏನೂ ಹೇಳಲಿಕ್ಕೆ ಬರೋದಿಲ್ಲ ನೋಡ್ರಿ, ರಂಗವ್ವಾ. ಗಾಂಧೀಜಿ ಅಂಥವರದು ಇಂಥಾ ಅವಸ್ಥೆ ಅಂದರೆ---(ಮತ್ತೆ ಪ್ರಕಾಶ ಝಗ್ ಎಂದು ಹೊಳೆಯಲು, ತಡೆದು, ಒಮ್ಮೆಲೆ) ಅಕ! ನೋಡಿದಿರಾ? ಅದೇ ನಾ ಹೇಳಿದ್ದು- (ತುಸು ನಿರ್ಧಾರದ ದನಿಯಿಂದ) ಎಲ್ಲಿಯೊ ಊರೀನೇ ಹತ್ತಿರಬೇಕು.

ರಂಗವ್ವ:-ಗೋವಿಂದಪ್ಪ, ನನಗೂ ಯಾಕೊ ಜೀವ ಹುರುಹುರು ಅಂಧಾಂಗ ಆಗ್ತದ. ನಡರಾತ್ರಿ ಆಗಿರಬೇಕು ಈಗ, ಇವರಿನ್ನೂ ಬಂದಿಲ್ಲ,

ಶಾಮನೂ ಮನ್ಯಾಗ ಇಲ್ಲ, ಒಂದಿಷ್ಟು ಹೋಗಿ ನೋಡಕೊಂಡಾದರೂ ಬರತೀರಾ ?

ಗೋವಿಂದಪ್ಪ:-(ಸಂದೇಹದಿಂದ) ಅಲ್ಲ---ಮತ್ತ-ನೀವು ಒಬ್ಬರೇ ಮನೀವಳಗ- (ಒಮ್ಮೆಲೆ ಕೇಳಿದಂತೆ ನೂಡಿ) ಅಕ–ಕೇಳಿದಿರಾ ? ಜನ "ಜೈ" ಅಂತ ಕೂಗಿಧಾಂಗ ಆಯ್ತು !

ರಂಗಮ್ಮ:-ಮತ್ತೇನಾರ ಛಲೋ ಸುದ್ದಿ ಬಂದಿರಬೇಕು ಅಂತೀರೇನು, ಗೋವಿಂದಪ್ಪ---

ಗೋವಿಂದಪ್ಪ:-(ಚಕಿತನಾಗಿ) ಛಲೋ ಸುದ್ದಿ ?

ರಂಗಮ್ಮ:-ಅಲ್ಲ–ಅಂದ್ರ-ಮುಂಚೆ ಏನೋ ಅವಸರದಾಗ ಹೇಳಿದ್ದರ-? ಇಷ್ಟರಾಗ ದೊಡ್ಡದೊಡ್ಡ ಡಾಕ್ಟರು ಕೂಡಿ ಗಾಂಧೀಜಿಯವರನ್ನು ಬದುಕಿಸಿದ್ದರೆ-? (ಒಮ್ಮೆಲೆ ಸಿಡುಕಿನ ದನಿಯಲ್ಲಿ) ಈ ಶಾಮ ಆದ್ರೂ ಮನೀವಳಗ ಇದ್ರ ರೇಡಿಯೊ ಹಚ್ಚಿ ಆದರೂ ಕೇಳತಿದ್ದಿವಿ—

ಗೋವಿಂದಪ್ಪ:-(ವಿಷಾದದಿಂದ ತಲೆ ಅಲ್ಲಾಡಿಸುತ್ತ) ರಂಗವ್ಮಾ, ಕೆಟ್ಟ ಸುದ್ದಿ ಸುಳ್ಳಾಗೋದಿಲ್ಲ. ಹಾಂಗೇನಾದ್ರೂ ಇದ್ರ ರಾಯರಾಗಲಿ, ಶಾಮರಾಯರಾಗಲಿ ಮೊದಲು ಮನೀಗೆ ಬಂದು ತಿಳಿಸಿ ಹೋಗತಿದ್ದರು (ಒಮ್ಮೆಲೆ ತಡೆದು) ಅಕ! (ಆಶ್ಚರ್ಯ ಸೂಚಿಸುವ ದನಿಯಲ್ಲಿ) ಏನಿದ್ದಿರಬೇಕು ಅದೂ—ಅಂತೀನಿ—ಏನು ಎಲ್ಲಿಯಾದರೂ ಬೆಂಕಿ ಹತ್ತೇದ? ಏನ, ಮತ್ತೇನಾದರೂ—

ರಂಗಮ್ಮ:–(ಅಧೈರ್ಯದ ದನಿಯಿಂದ) ಗೋವಿಂದಪ್ಪ, ಕೆಟ್ಟಕಾಲ ಬಂದಾಗ ಏನೇನಾಗ್ತದೊ ಏನೊ! ಒಂದಿಷ್ಟು ನೋಡಿಯೆ ಬರ್ತೀರಾ ? ಊರಾಗ ಏನ ಸಭಾ ನಡದದೋ, ಏನ ಮತ್ತ ಯಾವ ಕೆಲಸದಾಗಾದರೂ ತೊಡಗ್ಯಾರೊ, ಇನ್ನೂ ಯಾಕ ಬಂದಿಲ್ಲಾ—

[ಹಿಂಬದಿಗೆ ಕೆಳಗಿನಿಂದ ಯಾರೊ ಕೂಗಿದಂತೆ "ರಾಯ್ರು, ರಾಯರ. ಯಾರಿದ್ದಾರೇನ್ರಿ?.. ಏ ಶಾಮಾ? ..." ಎಂದು ಉಸಿರಿಲ್ಲದೆ ವೆಂಕಣ್ಣನ ದನಿ.

ಇತ್ತ “ಯಾರವರು? ವೆಂಕಣ್ಣ ಏನು? ಯಾರು?” ಎಂದು ರಂಗಮ್ಮ, “ಯಾರವರು? ಯಾರಂದ್ರಿ? ಯಾರು ಬೇಕು? ವೆಂಕಣ್ಣರಾಯರೇನು? ಬಂದೆ ತಡೀರಿ ಬಂದೆ” ಎಂದು ಗೋವಿಂದಪ್ಪ, ಇಬ್ಬರೂ ಏಕಕಾಲಕ್ಕೆ ಕೂಗುವರು; ಅವರು ಕೂಗುತ್ತಿರುವಾಗ ವೆಂಕಣ್ಣನ ದನಿ ಹಾಗೇ ಕೇಳಬರುವುದು. ಅಂತೂ ಒಂದೆರಡು ನಿಮಿಷ ಈ ಮೂವರ ಕೂಗಿನಿಂದ ರಂಗಸ್ಥಲವು ಪ್ರಕ್ಷುಬ್ಧವಾದಂತೆನ್ನಿಸುವುದು. ಆಮೇಲೆ ಒಮ್ಮೆಲೆ ಮೂವರೂ ತಡೆಯುವರು.]

ರಂಗಮ್ಮ:- ಬಂದೆ, ವೆಂಕಣ್ಣಾ. (ಎಂದು ಹೊರಡುವಳು)

ಗೋವಿಂದಪ್ಪ:-(ಮುಂದಾಗುತ್ತ) ತಲೆಬಾಗಿಲ ಹಾಕೀರೇನು? ನಾ ತಗೀತೇನಿ ಹೋಗಿ, ರಂಗಮ್ಮಾ, ನೀವು ತಡೀರಿ. (ರಂಗದ ಮಗ್ಗಲಿಗೆ ಹೋಗಿ ಕೆಳಗೆ ನೋಡುತ್ತಾ) ಬಂದೆ, ತಡೀರಿ, ವೆಂಕಣ್ಣಾ (ಎಂದು ಹಿಂಬದಿಗೆ ನಡೆದು ಅವಸರದಿಂದ ಇಳಿದು ಹೋಗುವನು)

[ರಂಗಮ್ಮ ಪ್ರಕಾಶ ಝಗ್ ಎಂದು ಹೊಳೆದತ್ತ ನೋಡುತ್ತಾ ನಿಲ್ಲುವಳು. ಸೆರಗಿನ ತುದಿಯಿಂದ ಹಣೆಯ ಬೆವರನ್ನು ಒರಸಿಕೊಳ್ಳುವಳು, ನಾಲಗೆ ಒಣಗಿದಂತೆ ನಟಿಸುವಳು, ಕೊನೆಗೆ ಸೆರಗಿನ ತುದಿಯಿಂದ ಮೆಲ್ಲಗೆ ಗಾಳಿಯನ್ನು ಹಾಕಿಕೊಳ್ಳುವಳು; ಆದರೆ ಇದೆಲ್ಲವನ್ನೂ ಮಾಡುವಾಗ ಆಕೆಯ ಮನಸ್ಸು ಮಾತ್ರ ಮತ್ತೆಲ್ಲಿಯೋ ಇದೆ ಎಂಬುದು ಆಕೆಯ ಮುಖಮುದ್ರೆಯಿಂದ ಸ್ಪಷ್ಟವಾಗುವುದು. ಇಷ್ಟರಲ್ಲಿ ಮುಂದಿನಿಂದ ವೆಂಕಣ್ಣ, ಅವನ ಹಿಂದೆ ಗೋವಿಂದಪ್ಪ ಅವಸರವಸರವಾಗಿ ಮೇಲೇರಿಬರುವರು.]

ರಂಗಮ್ಮ:- (ಒಮ್ಮೆಲೆ) ಎಲ್ಲಿಂದ ಬಂದೆಯೋ ವೆಂಕಣ್ಣಾ? ಸಭಾದಿಂದ ಬಂದೇನು?—ಇವರ್‍ಯಾರೂ ಇನ್ನೂ ಬಂದೇ ಇಲ್ಲ—

ವೆಂಕಣ್ಣ:- (ನಡುವೆಯೆ) ಸಭಾ ಇದ್ದಿಲ್ಲ ಇವತ್ತು, ರಂಗಮ್ಮಾ—

ರಂಗಮ್ಮ:- (ಹೆದರಿದ ದನಿಯಲ್ಲಿ) ಸಭಾ ಇಲ್ಲ! ಅಂದ್ರ ಇವರು—

ವೆಂಕಣ್ಣ:- (ಸಮಾಧಾನ ಹೇಳುವವನಂತೆ) ಯಾರು? ರಾಯ್ರು? ಅಲ್ಲೇ ಮುನಸೀಪಾಲ್ಟಿ ಒಳಗs ಇದ್ದಾರ, ಮತ್ತೇನಾದರೂ ಸುದ್ದಿ ಬರತದನೋ ಅಂತ ಹಾದೀ ನೋಡ್ತಾರ; ಶಾಮುಗ ಹೇಳಿದ್ದೆ ಅವರ ಜೋಡೀ ಉಳೀಲಿಕ್ಕೆ--ಈಗ ಮತ್ತೆ ನಾ ಅಲ್ಲೇ ಹೊರಟೇನಿ. ಹೋಗತಾ ನೋಡಿಯೇ ಹೋಗೂಣು ಬಂದಾರೇನೂ ಅಂತ-

ರಂಗಮ್ಮ:-ಇನ್ನೂ ಇಬ್ಬರೂ ಬಂದಿಲ್ಲೊ, ವೆಂಕಣ್ಣಾ.

ವೆಂಕಣ್ಣ:-(ಹುಸಿ ನಗೆಯಿಂದ) ನೀವು ಕಾಳಜೀ ಮಾಡ್ತೀರೇನು? ಏನೋ-ಇಡಿಯ ದೇಶಕ್ಕೇ ಸಿಡಿಲು ಬಡೆದಂಥಾ ಸುದ್ದಿ ಬಂತು—

ರಂಗಮ್ಮ:-(ಆಶಾಯುಕ್ತ ದನಿಯಿಂದ) ಅದೇ ಖರೇ ಆಯ್ತೇನು ಸುದ್ದಿ, ಏನ ಮತ್ತೇನಾದರೂ---? (ವೆಂಕಣ್ಣ ವಿಷಾದದಿಂದ ತಲೆ ಅಲ್ಲಾಡಿಸುವನು.)

ರಂಗಮ್ಮ:-ನಾವು ಎಂದೋ ಕಣ್ಮುಚ್ಚಿಬಿಡಬೇಕಾಗಿತ್ತು, ವೆಂಕಣ್ಣಾ. (ಕಂಠ ತುಂಬಿಬಂದು ತಡೆಯುವಳು.)

ವೆಂಕಣ್ಣ:-ರಂಗಮ್ಮ, ನಡೀರಿ. ನೀವು ವಿಶ್ರಾಂತಿ ತಗೋ ನಡೀರಿ. ನಾ ಹೋಗಿ ಅವರಿಬ್ಬರನ್ನೂ ಕರಕೊಂಡು ಬರ್ತೀನಿ, ಗೋವಿಂದಪ್ಪ ಎಚ್ಚರ ಇರ್ತಾರ, ಬಾಗಿಲ ತಗೀತಾರ—

ಗೋವಿಂದಪ್ಪ:-(ನಡುವೆಯೆ) ನಾ ಎಚ್ಚರೇ ಇದ್ದೀನೇಳ್ರಿ, ನೀವು ಮಲಗಿಕೋ ನಡೀರಿ.

ರಂಗಮ್ಮ:-ಲಗೂ ಬರ್ತೀಯಾ, ವೆಂಕಣ್ಣಾ? (ಹೊರಡುವಳು)

ವೆಂಕಣ್ಣ:-ನನಗಾದ್ರೂ ಎರಡನೇ ಕೆಲಸ ಏನದ? ಹೋದವನೆ— (ರಂಗಮ್ಮ ಕೆಳಗೆ ಹೋದುದನ್ನು ನೋಡಿ ಒಮ್ಮೆಲೆ ತಡೆದು—ಪಾವಟಿಗೆಗಳವರೆಗೆ ತುದಿಗಾಲಿನಿಂದ ನಡೆದುಹೋಗಿ—ಆಕೆ ಹೋದುದನ್ನು ಕಂಡು ತಿರುಗಿ ಧಾವಿಸಿ ಬಂದು—ಮೆಲು ದನಿಯಲ್ಲಿ. ಅವಸರವಸರವಾಗಿ) ಗೋವಿಂದಪ್ಪ, ಈಗ ನಾ ಹೇಳ್ತೀನಿ. ಕೇಳಿ ನಿಮ್ಮಷ್ಟಕ್ಕೆ ನೀವು ಸುಮ್ಮನಿರಬೇಕು. ನಾ ಈಗಿಂದೀಗ ಹೋಗ್ತೀನಿ, ನೀವು ಮಾತ್ರ ಒಂದು ಕೆಲಸ ಮಾಡಬೇಕು, ಬಾಗಿಲ ಎಲ್ಲ ಗಟ್ಟಿಯಾಗಿ ಮುಚ್ಚಿಕೊಳ್ಳಬೇಕು, ಮತ್ತ ಮನೆಬಿಟ್ಟು ಕದಲಬಾರದು. (ಹೊರಟವನು ತಡೆದು ನಿಂತು) ಜೀವ ಹೋಗೋ ಪ್ರಸಂಗ ಬಂದರೂ ಕದಲ ಬಾರ್—

ಗೋವಿಂದಪ್ಪ:-(ಒಮ್ಮೆಲೆ ಅವನನ್ನ ಅಡ್ಡಗಟ್ಟಿ) ವೆಂಕಣ್ಣಾ, ರಾಯರಿಗೇನಾಗೇದ? ಎಲ್ಲಿದ್ದಾರ ರಾಯ್ರು?

ವೆಂಕಣ್ಣ:-ಎಲ್ಲಿದ್ದಲ್ಲಿಂದ ಕರಕೊಂಡು ಬರತೀನಿ, ನೀವು ಮಾತ್ರ—

ಗೋವಿಂದಪ್ಪ:-(ನಡುವೆಯೆ) ಊಹುಂ-ಆದಾಗದು. ನೀವು ಇಲ್ಲಿಯೆ ಕೂಡ್ರಿ, ರಂಗಮ್ಮ ಒಬ್ಬರೇ ಇದ್ದಾರ, ನಾ ಹೋಗ್ತೀನಿ—

ವೆಂಕಣ್ಣ:-(ಅವನನ್ನು ಒಲಿಸುವ ಯತ್ನದಿಂದ) ಗೋವಿಂದಪ್ಪ ಸುಮ್ಮನೇ ಹೊತ್ತು ಕಳೆಯೋದು ಬ್ಯಾಡ, ನನಗ್ಗೊತ್ತದ ರಾಯ್ರು ಎಲ್ಲಿದ್ದಾರ, ಪರಿಸ್ಥಿತಿ ಎಂತಹದು ಅಂತ, ನಾನು ತಟ್ಟನೆ ಹೋಗಿ—

ಗೋವಿಂದಪ್ಪ:-(ನಿರ್ಧಾರದ ದನಿಯಲ್ಲಿ)ರಾಯರಿದ್ದಲ್ಲಿ ಈ ಗೋವಿಂದಪ್ಪ ಇರಲೇಬೇಕು. ಈ ಜೀವ ಹಾರಾಡೋದು ರಾಯರ ಉಸಿರಿನಿಂದ. ವೆಂಕಣ್ಣಾ, ನೀವು ಹೇಳದಿದ್ದರ ಅಷ್ಟೇ ಹೋಯಿತು, ಆದರ ರಾಯರ ವ್ಯಾಲೆ ಏನೋ ಗಂಡಾಂತರ ಪ್ರಸಂಗ ಬಂದದ ಅನ್ನೋದು ಸ್ಪಷ್ಟ ಅದ, ಅದಕ್ಕ ನಾ ಹೋಗಲೇ—

ವೆಂಕಣ್ಣ:-(ನಡುವೆಯೇ) ಗೋವಿಂದಪ್ಪ, ರಂಗಮ್ಮ ಒಬ್ಬರೇ ಮನೀ ವಳಗ—

ಗೋವಿಂದಪ್ಪ:-ಅದ್ಕೇ ಹೇಳಿದೆ ನೀವು ಇಲ್ಲಿಯೇ ಉಳೀರಿ ಅಂತ. ಒಂದು ವ್ಯಾಳ್ಯಾ ನೀವು ನನ್ನನ್ನು ಬಿಟ್ಟು ಹೋದರೂ ನಾನು ಬಂದೇ ತೀರಬೇಕಾಗೋದು.

ವೆಂಕಣ್ಣ:-(ತಟ್ಟನೆ ನಿರ್ಧಾರಕ್ಕೆ ಬಂದು) ಆಗಲಿ—ಹುಂ—ಹಾಂಗಾದರ ನೀವೇ ಹೋಗಿರಿ, ಕೆಳಗೆ ಪಿಟ್ ಅಂತ ತುಟೀ ಬಿಚ್ಚದೇನೇ ಹೋಗ್ಬೇಕು—(ತೋರಿಸುತ್ತ) ಅಲ್ಲಿ ಏನೋ ಬೆಳಕು ಉರೀತದಲ್ಲಾ? (ಗೋವಿಂದಪ್ಪನು ತಲೆ ತೂಗುಲು) ಅದು ನಾಳಿನ ಉತ್ಸವದ ಮಂಟಪ—

ಗೋವಿಂದಪ್ಪ:-(ಥಕ್ಕಾಗಿ) ಆಂ? ಉತ್ಸವದ ಮಂಟಪ? ಅದಕ್ಕ ಬೆಂಕಿ—

ವೆಂಕಣ್ಣ:-(ನಡುವೆಯೆ) ಬೆಂಕಿಯನ್ನು ಹಚ್ಯಾರ—ಕಿಡಿಗೇಡಿಗಳು. ಅದನ್ನ ಆರಿಸೋ ಪ್ರಯತ್ನದಾಗ ರಾಯರು ಇರಬೇಕು—ನೀವು ಅಲ್ಲಿಗೇ ಹೋಗತಕ್ಕದ್ದು—(ಗೋವಿಂದಪ್ಪನು ಓಡುವದರಲ್ಲಿರಲು) ತಡೀರಿ ಈಗ ಶಾಮು ಆ ಕಡೀನೇ ಹೋದ, ನಾನು ಇಲ್ಲಿಗೆ ಬಂದೆ ನೋಡಿ ಹೋಗೋ

ಣಂತ-ಶಾಮನನ್ನು ಹುಡುಕರಿ-(ಗೋವಿಂದಪ್ಪನು ಹೊರಡಲು) ಮೊದಲು ರಾಯರನ್ನ ಸುರಕ್ಷಿತ ತರೋದು ಮುಖ್ಯ—ಶಾಮನ ಕಾಳಜಿ ಇಲ್ಲ ನನಗ (ಗೋವಿಂದಪ್ಪನು ಪಾವಟಿಗೆ ಇಳಿಯುತ್ತಿರುವಾಗ) ಗೋವಿಂದಪ್ಪಾ—

[ಅವನು ತಡೆಯುವನು. ಓಡುತ್ತ ಹೋಗಿ ಅವನ ಕಿವಿಯಲ್ಲಿ ಏನೇನೋ ಹೇಳುವನು, ಗೋವಿಂದಪ್ಪನು ಆವೇಶದಿಂದ ತಲೆ ತೂಗುತ್ತಲೆ ಕೆಳಗೆ ಧಾವಿಸುವನು, ಆಮೇಲೆ ಮೆಲ್ಲನೆ ಮಾಳಿಗೆಯ ಮಧ್ಯಕ್ಕೆ ನಡೆದುಬಂದು— ಒಮ್ಮೆಲೆ ದಂಡೆಗೆ ಹೋಗಿ ಹಣಿಕಿಕ್ಕಿ ಕೆಳಗೆ ನೋಡಿ, ಏನು ಮಾಡಬೇಕೆಂಬುದು ತಿಳಿಯದೆ, ಎರಡೂ ಮುಷ್ಟಿಗಳನ್ನು ಬಿಗಿಯುತ್ತ ಬೆಚ್ಚುತ್ತ ರಂಗದ ಮಧ್ಯಕ್ಕೆ ಬಂದು—ಉಸುರ್ಗರೆದು—]

"ಪ್ರಾಮಾಣಿಕತನದ ಪ್ರಯೋಜನ ಅಂದರ ಠಕ್ಕತನದ ಪತಾಕೆಯನ್ನು ನಿಲ್ಲಿಸೋದು"! (ಎದುರು ನೋಡುತ್ತ) ಅದೋ ಉರೀತಾ ಇದೆ ಧೂರ್ತರ ದೇದೀಪ್ಯಮಾನ ಪತಾಕೆ!

ರಂಗಮ್ಮ:-(ಪಾವಟಿಗೆಗಳ ಮೇಲೆ ಮುಖವನ್ನಷ್ಟೆ ತೋರಿಸಿ) ಗೋವಿಂದಪ್ಪಾ

ವೆಂಕಣ್ಣ:-(ಒಮ್ಮೆಲೆ ಎಚ್ಚತ್ತವನಂತೆ) ಏನು, ಯಾಕೆ ರಂಗಮ್ಮಾ, ನೀವು ಮಲಗಿಕೋಲಿಲ್ಲವೇ ?

ರಂಗಮ್ಮ:-(ಮೇಲೆ ಹತ್ತುತ್ತ) ಗೋವಿಂದಪ್ಪ ಯಾಕೆ ಹೋದನೋ?

ವೆಂಕಣ್ಣ:- (ಹುಸಿ ನಗೆಯಿಂದ) ನಾನೇ ಹೋಗಿ ಬರ್ತೇನಿ ರಾಯರ್ನ ಕರಕೊಂಡ ಬರ್ಲಿಕ್ಕೆ, ನೀವಿಲ್ಲೆ ಇರ್ರಿ, ಅಂದ; ನೀನೇ ಹೋಗಿ ಬಾರಪಾ, ಅಂದೆ.

ರಂಗಮ್ಮ:-(ಮೇಲೆ ಬಂದು ತನ್ನಷ್ಟಕ್ಕೆ ಎಂಬಂತೆ) ಏನೇನು ನಡೆದಿವ್ಯೋ! ಏನು ಹೇಳ್ತೀರೋ ? ನನಗಂತೂ ಚೈನಿನೇ ಬೀಳವಲ್ದು, ಕಣ್ಮುಚ್ಚಿದೆ ನೇ, ಆ ದಿಲ್ಲಿಯದೇ ನೆನಪಾಗತದ, ಅಂಥಾ ಮಹಾತ್ಮನ್ನ ಇರಗೊಡಲಿಲ್ಲ ಈ ಜನಾ! ವೆಂಕಣ್ಣಾ, ಯಾಕೊ, ಏನೋ ಆ ಸುದ್ದಿ ಕೇಳಿದಾಗಿನಿಂದ ಜಗತ್ತಿಗೇ ದೊಡ್ಡ ಅಪಶಕುನ ಆಧಾಂಗ ಅನ್ನಿಸತದ. ಅದಕೇ ಇವರು ಹುಚ್ಚನಾಗಿನಿಂದೆ ಹೋಗಿಬಿಟ್ಟರು, ಕಣ್ಣಿಗೆ ಕಣ್ಣು ಹತ್ತಲೊಲ್ಲದು.

ವೆಂಕಣ್ಣ:-(ಸಂತಯಿಸುವವನಂತೆ) ಊರಿಗೇನೇ ಸಮಾಧಾನ ಹೇಳು ವವರು ಜಯರಾಯರು, ಹೋದವರು ಬಂದವರು ಅವರ್ನೆ ಕೇಳುವವರು ಹಿರಿಯ ಮನ್ಯುಷ್ಯರಂತ—

ರಂಗಮ್ಮ:-(ನಡುವೆಯೆ) ವೆಂಕಣ್ಣಾ, ನನಗ ಈ ಹಿರೀತನಾನೇ ಸಾಕಾ ಗೇದ. ಯಾತರ ಹಿರೀತನ ಹೇಳು. ಮನೀವಳಗ ಬೆಳೆದ ಮಕ್ಕಳು ನಂ ಮಾತ ಕೇಳಲಿಕ್ಕಿಲ್ಲ, ಇನ್ನ ಹೊರಗಿನವರು—

ವೆಂಕಣ್ಣ:-(ಮೇಲಿನಂತೆ) ಆದರೆ ಊರಿಗೆ ಊರೇ ಒಪ್ಪಿಕೊಂಡದ ಜಯರಾಯರು ಮುಂದಾಳು ಅಂತ—

ರಂಗಮ್ಮ:-(ನಡುವೆಯೆ) ಏನು ಕಾಲ ಬದಲಾಗೇದೋ, ಏನು ನಾವೇ ಮುದುಕರಾದೆವೋ! ಇವರು ಹೊಸದಾಗಿ ವಕೀಲೀ ಬಿಟ್ಟಾಗ ನನಗೂ ಇದೆಲ್ಲಾ ಸೇರತಿತ್ತು, ಇವರು ಮಂದೀವಳಗ ಹೋಗೋದು, ಮುಂದಾಳು ಅನ್ನಿಸಿಕೊಳ್ಳೋದು. ಆಗಿನ ಮಾತೇ ಬ್ಯಾರೆ ಇತ್ತು, ವೆಂಕಣ್ಣಾ; ಹೋದ ಹೋದಲ್ಲಿ ಗಾಂಧಿಯವರ ಹೆಸರಿನ ಆಧಾರ ಇತ್ತು. ಅವರ ಬೆಳಕಿನೊಳಗ ನಾವು ನಡೀತಿದ್ದಿವಿ. ಆದರೆ ಈಗೀಗ ಕತ್ತಲೀ ವಳಗ ಹೆಜ್ಜೀ ಇಟ್ಟ್ಹಾಂಗ ಆಗೇದ; ಪ್ರತಿಯೊಂದು ಹೆಜ್ಜಿಯನ್ನೂ ಅತೀ ಕಾಳಜಿಯಿಂದ—

ವೆಂಕಣ್ಣ:-(ಹುಸಿ ನಗೆಯಿಂದ) ನೀವು ಬರೋ ನಿದ್ದಿಯನ್ನು ತಡೆವರೂ ಬೀಳೋ ಕನಸು ಬಿದ್ದ್ಹಾಂಗೇ ಕಾಣತದ. ಆಂ? ಹುಂ—ಅಲ್ಲ—ರಾತ್ರಿ ಬಹಳ ಆಯ್ತು—

ರಂಗಮ್ಮ:- ಅಂತೇ ಕಾಳಜಿಯಿಂದ ನಿದ್ದೆ ಬರಲೊಲ್ಲದು. ವೆಂಕಣ್ಣಾ—[ಕೆಳಗಿನಿಂದ "ಗೋವಿಂದಪ್ಪಾ" ಎಂಬ ಕೂಗು] (ಚಕಿತಳಾಗಿ) ಯಾರು? ಶಾಮನ ದನಿ ಅಲ್ಲ?

ವೆಂಕಣ್ಣ:- (ತಾದಿಗೆ ಹೋಗಿ ಕೆಳಗೆ ನೋಡುತ್ತ) ಹಂ—ಬಾಗಿಲು ತಗೀತದ ನಿಲ್ಲು (ಎಂದು ರಂಗಮ್ಮ ತನ್ನ ಕಡೆ ನೋಡುವದಿಲ್ಲ ಎಂದು ಕಂಡು ಕೆಳಗೆ ಶಾಮುನಿಗೆ ಕೈಸನ್ನೆಯಿಂದ ಸುಮ್ಮನಿರಲು ಸೂಚಿಸಿ) ಬಂದೆ— (ಕೆಳಗೆ ಇಳಿಯುವನು).

ರಂಗಮ್ಮ:-(ತನ್ನಷ್ಟಕ್ಕೆ ಎಂಬಂತೆ) ನನಗಂತೂ ಕಾಲೇ ಏಳಲೊಲ್ಲವು ತಾಯೀ, ಶಾಮುನ ದನಿ ಕೇಳಿಸಿದ ಕೂಡಲೆ ನೈ ಜುಮ್ ಎಂದಿತು, ಇನ್ನೂ ಇವರು ಯಾಕ ಬರಲೊಲ್ಲರೋ ಏನೋ! (ಎಂದು ಮೆಲ್ಲಗೆ ಕೆಳಗಿಳಿದು ಹೋಗುವಳು.)

[ಒಂದೆರಡು ನಿಮಿಷ ರಂಗಸ್ಥಲವನ್ನು ತೆರವಾಗಿಯೇ ಇಡಬೇಕು. ಆದರೆ, ಒಮ್ಮೆ ದೂರದ ಪ್ರಕಾಶ ಝಗ್ ಎಂದದರ ಸೆಳಕಿನ ಸುಳುವನ್ನು ತೋರಿಸಿದ ಮೇಲೆ ತೀರ ದೂರದ ಹಿನ್ನೆಲೆಯಲ್ಲಿ ಮೊದಲಿನಂತೆ.

"ರಘುಪತಿ ರಾಘವ ರಾಜಾರಾಮ! ಪತಿತಪಾವನ ಸೀತಾರಾಮ" ಎಂಬ ಮೇಳ ಗೀತೆಯನ್ನು ಕೇಳಿಸಬೇಕು. ಒಂದೆರಡುಸಲ ಅದರ ದನಿ ಕೇಳಿದ ಮೇಲೆ ಅದು ತೀರ ಅಸ್ಪಷ್ಟ ಕೇಳಿಸುವಷ್ಟು ದೂರ ಸರಿಯಬೇಕು. ಇಷ್ಟರಲ್ಲಿ ಮೊದಲು ವೆಂಕಣ್ಣನು, ಹಿಂದಿನಿಂದ ಶಾಮುನು ಬರುವರು. ಶಾಮುನು ಪಾವಟಿಗೆಗಳನ್ನು ಹತ್ತುವಾಗ ಆಗಾಗ ಹಿಂತಿರುಗಿ ಕೆಳಗೆ ನೋಡುತ್ತಾನೆ. ಕೊನೆಯ ಪಾವಟಿಗೆಯ ಹತ್ತಿರ ತಡೆದು, ತುಸು ಬಾಗಿ, ಕೆಳಗೆ ತನ್ನ ತಾಯಿಯನ್ನುದ್ದೇಶಿಸಿ--]

ಶಾಮು:-ಅವರು ದೊಡ್ಡವರು! ಹಿಂದ್ಮೋಟರದೊಳಗ ಬರತಾರವ್ವ. ಆಂ? ಮಾಡು, ಮಾಡು-ಮಾಡು, ಬಹಳೇ ಛಲೋ ಆಯ್ತಿಲ್ಲಾ? ಅವರ ಪುಣ್ಯದಿಂದ ಅಪರಾತ್ರಿ ಚಳೀವಳಗೆ ನಮಗೂ ಚಹಾ ಸಿಗಲಿ. ಹುಂ— (ಎಂದವನೆ ಚಟ್ಟನೆ ಮೇಲೇರಿ, ವೆಂಕಣ್ಣನನ್ನು ಕೈಯಿಂದೆಳೆದು ರಂಗದ ಮುಂತುದಿಯವರೆಗೆ ತಂದು, ಆವೇಶದ ಕಳ್ಳ ದನಿಯಲ್ಲಿ-) ಕೇಳಿದಿಯೊ ಇಲ್ಲೊ? ಮಂಟಪ ಸುಟ್ಟುಹೋಯಿತು!

ವೆಂಕಣ್ಣ:-(ತಲೆ ತೂಗುವನು) ಜಯರಾಯರೆಲ್ಲಿ?

ಶಾಮು:- ಹಾಸ್ಪಿಟಲಿಗೆ ಕರೆದುಕೊಂಡು ಹೋಗೇದ ಅವರನ್ನ.

ವೆಂಕಣ್ಣ:-(ಗಾಬರಿಯಿಂದ) ಆಂ? ಏನು? ಹಾಸ್ಪಿಟಲಿಗೆ?

ಶಾಮು:-ಅವರೂ ಹೆದರುವಂಥಾದ್ದೇನೂ ಆಗಿಲ್ಲ. ಇನ್ನೂ ತನಕ ಅಪಾಯೇನೂ ಆಗಿಲ್ಲ—

ವೆಂಕಣ್ಣ:-(ಆಶ್ಚರ್ಯದಿಂದ) ಇನ್ನೂ ತನಕ? ಅಂದರ?

ಶಾಮು:-(ತ್ವೇಷದ ದನಿಯಲ್ಲಿ) ಅಂದ್ರೇನು? ಮುಗೀತಂತ ತಿಳಿ

ದೀಯಾ ? ಇಷ್ಟು ವರ್ಷ ತಡೆದಿಟ್ಟ ದುಷ್ಟತನ ಎಲ್ಲ ದಿಲ್ಲೀವಳಗ ಗುಂಡು ಹಾರಿದ ಕ್ಷಣ ಸಿಡಿದು ಹೊರಬಿದ್ದದ. ಜೋರಿನಿಂದ ತಡೆದದ್ದು, ಈಗ ಅಷ್ಟೇ ಜೋರಿನಿಂದ ಪುಟಿದು ಚಿಮ್ಮತಾ ಇದೆ.

ವೆಂಕಣ್ಣ:-(ಮೇಲಿನಂತೆಯೆ) ಆಂ ? ಅಲ್ರೊ–ಒಮ್ಮೆಲೆ ಹೀಂಗ ಹ್ಯಾಂಗ ಬದಲಾಯಿತು ವಾತಾವರಣ ? ಯಾಕಂದರೆ ಸಂಜೀ ಆರು ಗಂಟೆಗೆ ಸುದ್ದೀ ಕೇಳಿದ ಕೂಡಲೆ ನಾನು ತಟ್ಟನೆ ಹೊರಬಿದ್ದೆ, ಊರಸುತ್ತ ಅಡ್ಡಾಡಿ ಬಂದೆ, ಸುದ್ದಿ ಹಾಂ—ಹಾಂ—ಅನ್ನೂದರೊಳಗೆ ಹಬ್ಬಿತ್ತು, ಜನ ಹೌಹಾವರ್ದ್ಹಾಂಗ ಎಲ್ಲಾ ಕೆಲಸಬಿಟ್ಟು ಅಲ್ಲಲ್ಲಿ ಅಡ್ಡಾಡುತ್ತಿದ್ದರು- ಅಲ್ಲ, ಅಂಥಾದ್ದು ಹೀಂಗ ಹ್ಯಾಂಗ—

ಶಾಮು:-(ನಡುವೆಯೆ) ಬಿರುಗಾಳಿ ಬೀಸೋ ಮುಂಚೆ ಎಲ್ಲಾ ಸ್ತಬ್ಧ ಇರೋದಿಲ್ಲ? ಆದರೂ ನನಗ ಸಂಶಯ ಬಂದಿತ್ತು, ಅದಕೇ ರಾಯರು ಹೊರಬಿದ್ದ ಕೂಡಲೆ ನಾನೂ ಅವರ ಜೋಡೀನೆ ಹೊರಬಿದ್ದೆ. ರಾಯರ ಮನಸ್ಸು ದಿಲ್ಲಿಯ ಸುದ್ದಿಯಿಂದ ಎಷ್ಟು ಹಣ್ಣಾಗಿತ್ತು ಅನ್ನೋದು ಗೊತ್ತು. ಹೋದರು, ಮ್ಯುನಸಿಪಲ್ ಕಚೇರಿಗೆ ಸೂಟೀ ಕೊಟ್ಟರು, ಕಚೇರಿ ತುಂಬ ಅಡ್ಡಾಡಿದರು. ಒಂದೂ ಮಾತಿಲ್ಲದೆ ತಮ್ಮ ಆಫೀಸಿನೊಳಗ ಕೂತುಬಿಟ್ಟರು. ನಾನೂ ಅಲ್ಲಿಯೇ ಹೊರಗೆ ಅವರಕೂಡ ಇವರಕೂಡ ಮಾತಾಡ್ತಾ ನಿಂತುಕೊಂಡೆ; ಹೊತ್ತು ಎಷ್ಟಾಯಿತೋ ಗೊತ್ತಿಲ್ಲ. ಸುಮಾರು ಒಂಬತ್ತು ಆಗಿರಬಹುದು, ರಾಯರು ಹೊರಬಿದ್ದರು, ಹೊರ ಬಿದ್ದವರೇ ನಾಳಿನ ಉತ್ಸವದ ತಯಾರಿ ನಡೆದತ್ತ ಸಾಗಿದರು. ನಾನೂ ಜೋಡೀನೇ ನಡೆದೆ. ದಾರೀ ವಳಗ ಅಲ್ಲಲ್ಲಿ ಅಲ್ಲಲ್ಲಿ ಜನ ಗುಂಪು ಕಟ್ಟಿ ಕೊಂಡು ನಿಂತಿತ್ತು; ರಸ್ತೆ ನಡುವೆ ನಡೀತಾ ಇದ್ದವರು ನಾವಿಬ್ಬರೇ. ಬರ ಬರುತಾ ಜನರು ನಮ್ಮನ್ನು ದಿಟ್ಟಿಸಿ ನೋಡ ತೊಡಗಿದರು. ಮುಂದೆ ಹೋದ್ಹಾಂಗ ಕೆಲವು ಕಡೆ ನಮ್ಮನ್ನು ನೋಡಿ ಏನೋ ಗುಜು ಗುಜು ಮಾತಾಡತಿದ್ದರು; ಒಂದ ಕಡೇ ಅಂತೂ ನಕ್ಕಹಾಂಗ ಆಯ್ತು, ನನ್ನ ಮೈ ಜುಂ ಎಂದಿತು. ಮೆಲ್ಲಗೆ ತಿರುಗಿ ನೋಡಿದೆ, ಎಷ್ಟೋ ಗುಂಪು ಸದ್ದಿಲ್ಲದೆ ನಮ್ಮ ಬೆನ್ನ ಹಿಂದಿನಿಂದಲೆ ನಡೆದಿದ್ದವು! ಅಂತೂ ನಮ್ಮ ಮಂಟಪ

ಕಟ್ಟೋವಲ್ಲಿಗೆ ಬಂದಿವಿ. ಅಲ್ಲಿ ಕೆಲಸ ನಿಂತಿತ್ತು, ರಾಯರು ಅಲ್ಲಿಗೆ ಹೋದವರೆ ನಿಂತು ಬಿಟ್ಟರು. ಗೊಂಬೀ ಹಾಂಗ-ನಿಂತುಬಿಟ್ಟರು. ಜನಾ ನಮ್ಮ ಹಿಂದೆ ಗುಂಪುಗಟ್ಟಿ ನಿಂತಿತ್ತು; ಎಷ್ಟೊತ್ತು ಹಾಗೇ ನಿಂತು ಕೊಂಡೆವೊ! ಒಮ್ಮೆಲೆ ಹಿಂದಿನಿಂದ ಒಂದು ಕಲ್ಲು ಬಿದ್ದಾಗೇ ನಾನು ಎಚ್ಚತ್ತೆ. ರಾಯರು ಹುಚ್ಚು ಹಿಡಿದವರ ಹಾಂಗ ತಿರುಗಿ ನೋಡಿದರು, ಅದೇ ಹೊತ್ತಿಗೆ ಇನ್ನೊಂದು ಕಲ್ಲು ಬಂದು ಅವರ ದವಡೆಗೆ ಬಡೀತು, ತುಟೀ ವಡೀತು, ರಕ್ತ ಸೋರಹತ್ತಿತು, ಇದೇನಾಯ್ತೋ ಅನ್ನೋದರೊಳಗ ಜನಾ ಒಂದೇ ಸವನೆ ನುಗ್ಗತೊಡಗಿತು. ಚೀರಾಟ—ಕೂಗಾಟ-ರಾಯರ್ನ ಅಲ್ಲಿಂದ ಪಾರ ಮಾಡಬೇಕೂ ಅಂತ ನನ್ನ ಸಂಕಟ—ಅಷ್ಟರೊಳಗ ಯಾರೋ ಮಂಟಪಕ್ಕೆ ಬೆಂಕೀ ಹಚ್ಚಿದರು—ಆ ಬೆಳಕಿನೊಳಗ ಸುತ್ತ ಮುತ್ತಲಿನ ದೃಶ್ಯ ಎಷ್ಟು ಭಯಾನಕ ಕಂಡಿತು, ನೆರೆದ ಜನರ ದೃಷ್ಟಿ ಎಂತಹ ಅಮಾನುಷ ಕಂಡಿತು, ಆ ಇಡೀ ಜನ ಸಮೂಹ ಆ ಬೆಂಕಿವಳಗ ಸುಟ್ಟು ಹೋಗಿದ್ದರೂ ಒಂದು ಹನಿ ಕಣ್ಣೀರು ಉದುರುತ್ತಿದ್ದಿಲ್ಲ—ಪಶು! ಶುದ್ಧ ವನ್ಯಪಶುಗಳ ಹಾಗೆ ಕಂಡಿತು ಆ ಸಮೂಹ! ರಾಯರು ಒಮ್ಮೆಲೆ ಚೀರಿ ಆ ಮಂಟಪದೊಳಗ ನುಗ್ಗಿದರು. ನಾನೂ ಧಾವಿಸಿದೆ ಅವರ ಹಿಂದಿನಿಂದೆ. ಎಷ್ಟೊತ್ತು ಹೀಗೇ ನಡೀತೋ, ಮುಂದೆ ಏನಾಯ್ತೋ ಯಾವುದೂ ಎಚ್ಚರ ಇಲ್ಲ! ಕೂಗೋ ಜನಸಮೂಹ ಚದುರಿದ್ದು, ಮಂಟಪ ಸುಟ್ಟು ಬೂದಿ ಆದದ್ದು, ಇವೆರಡು ಗೊತ್ತು—ಏನಾಯ್ತು ಅಂತ ಅತ್ತಿತ್ತ ನೋಡೋದರಾಗ ಗೋವಿಂದಪ್ಪ ಬಂದ, ಆ ಜನಸಮೂಹದ ನಡುವಿನಿಂದ ಹಾಯ್ದು ಅವನೂ ಗಾಯಗೊಂಡ ಹುಲೀ ಹಾಂಗೇ ಬಂದಿದ್ದ; ಹಣೀಗೆ ರಕ್ತ ಸೋರುತ್ತಿತ್ತು, ತೊಟ್ಟ ಅಂಗಿ ಹರಿದಿತ್ತು, ಒಂದು ಕಾಲ ಕುಂಟ ತಿತ್ತು. ಅವನ ನೋಡಿದ ಕೂಡಲೆ "ಮೊದಲು ಇಲ್ಲಿಂದ ನಾವು ಪಾರಾ ಗೋಣ" ಅನ್ನಿಸಿತು. ಇಬ್ಬರೂ ಕೂಡಿ ರಾಯರ್ನ ಸಮೀಪದ ಡಾಕ್ಟರದ ಕಡೆ ಕರೆದುಕೊಂಡು ಹೋದಿವಿ—

ವೆಂಕಣ್ಣ:-(ಗಾಬರಿಯಿಂದ) ಅಲ್ಲ-ಅಂದ್ರ-ರಾಯರಿಗೆ—

ಶಾಮು:-(ನಡುವೆಯೆ) ಅಂತಹಾದ್ದೇನೂ ಆಗಿಲ್ಲ. ಗಾಯ ತೊಳೆದು

ಡಾಕ್ಟರರು ತಮ್ಮ ಮೋಟಾರಿನೊಳಗೇ ಕರಕೊಂಡು ಬರ್ತಾರ.— ಆದರೆ ಇಲ್ಲಿನೀವು ಗಾಬರಿ ಆಗೀರಿ ಅಂತ ಗೋವಿಂದಪ್ಪ ಹೇಳಿದ್ದಕ್ಕ ನಾ ಮುಂದೆ ಓಡಿಬಂದೆ—

ವೆಂಕಣ್ಣ:-(ತನ್ನಷ್ಟಕ್ಕೆ ಎಂಬಂತೆ ಕ್ರಮೇಣ ಏರುತ್ತಿರುವ ಜಿಟ್ಟಿನಿಂದ) ನಾಚಿಕೆಗೇಡು, ರಾಯರಂಥ ಸಾತ್ವಿಕ ಪ್ರಾಣಿಗೆ--

ಶಾಮು:-(ನಡುವೆಯೆ ವಿಷಾದಯುಕ್ತ ದನಿಯಿಂದ) ಆದರೆ ಸತ್ವಪರೀಕ್ಷಾ ಇಷ್ಟಕ್ಕೆ ಮುಗೀತು ಅಂತ ನನಗನಿಸೋದಿಲ್ಲ (ವೆಂಕಣ್ಣನು ಕುತೂಹಲದಿಂದ ತನ್ನನ್ನು ನೋಡಲು) ಈ ರಾತ್ರಿ ಸುರಕ್ಷಿತ ಪಾರಾದರೆ—ಮುಂಟಪದಗತಿ ಮನೆಗೂ ಬರದಿದ್ದರೆ—

(ವೆಂಕಣ್ಣನು ಪೆಚ್ಚಾಗಿ ತನ್ನನ್ನು ನೋಡಲು ಮಾತನ್ನು ಮುಗಿಸದೆ, ಪ್ರೇಕ್ಷಕರ ಎಡಬದಿಯ ಕುಂಬಿಯ ಕಡೆಗೆ ಹೋಗಿ ದೂರ ನೋಡುತ್ತ ನಿಲ್ಲುವನು. ವೆಂಕಣ್ಣನೂ ಮೊದಲು ತಡೆದು ಆಮೇಲೆ ಮೆಲ್ಲಗೆ ಅವನ ಕಡೆ ನಡೆಯುವನು. ಮತ್ತೆ ದೂರದ ಹಿನ್ನೆಲೆಯಲ್ಲಿ "ರಘುಪತಿ ರಾಘವ ರಾಜಾರಾಮ। ಪತಿತಪಾವನ ಸೀತಾರಾಮ।" ಎಂಬ ಭಜನೆ ಕೇಳ ಬರುವದು. ತುಸು ಗಾಳಿಯೂ ಜೋರಾಗಿ ಬೀಸುತ್ತಿದೆ. ಶಾಮುನ ತಲೆಗೂದಲು ಹಾರುತ್ತಿವೆ, ಅದನ್ನು ಸರಿಪಡಿಸುವಾಗ ಅವನು ಮೆಲ್ಲಗೆ ಮುಖ ತಿರುಗಿಸಿ ವೆಂಕಣ್ಣನನ್ನು ನೋಡುವಷ್ಟರಲ್ಲಿ ಕೆಳಗೆ ಮೋಟಾರ ಹಾರ್ನದ ಸದ್ದು—)

ವೆಂಕಣ್ಣ:- } (ಕೂಡಿಯೆ) ರಾಯರು—
ಶಾಮು:- } ಬಂದರ ಅಂತ ಕಾಣಿಸ್—

[ಈ ಮಾತು ಮುಗಿಯುವ ಮುಂಚೆ ಇಬ್ಬರೂ ಕೆಳಗೆ ಧಾವಿಸುವರು.]

[ಈಗ ಶಕ್ಯವಾದಲ್ಲಿ "ರಘುಪತಿ ರಾಘವ" ಎಂಬ ಮೇಳ ಭಜನೆಯನ್ನು ಬರಿಯ ತಂತು ವಾದ್ಯಗಳಿಂದಲೇ ನುಡಿಯಬೇಕು. ಕ್ರಮೇಣ ಭಜನೆಯ ಲಯ ವೇಗವಾಗುತ್ತ ಹೋಗುವದು. ಲಯದ ಈ ವೇಗವನ್ನನುಸರಿಸಿಯೆ ಮುಂದೆ ಕಾಣಿಸಿದ ದೃಶ್ಯ ಕೆಲವು ಸಮಯದವರೆಗೆ ನಡೆಯಬಹುದು.]

[ಒಂದು ನಿಮಿಷದ ತರುವಾಯ ಗೋವಿಂದಪ್ಪನು ಅವಸರದಿಂದ, ತಲೆಯ ಮೇಲೊಂದು ಆರಾಮ ಖುರ್ಚಿಯನ್ನು ಹೊತ್ತುಕೊಂಡು ಪಾವಟಿಗೆಗಳಿಂದ ಬರುವನು. ಅವನ ವೇಷ ಕೆಲವು ನಿಮಿಷ ಮುಂಚೆ ಶಾಮುನು ವರ್ಣಿಸಿದಂತೆ; ಹಣೆಗೆ

ಪಟ್ಟಿಯನ್ನು ಕಟ್ಟಿದ್ದಾನೆ. ಕುರ್ಚಿಯನ್ನು ಇಟ್ಟು ಲಗು ಬಗೆಯಿಂದ ಪಾವಟಿಗೆಯ ಹತ್ತಿರ ಹೋಗಿ.]

ಗೋವಿಂದಪ್ಪ:- ಸಾಕು, ಶಾಮರಾಯರ—ಒಂದೇ ಸಾಕು-ರಾಯರ ಪೂರ್ತಿ. ಇಲ್ಲಿ ನೋಡಿರಿ ಲಗೂ. ಮುಂದಿನ ಬಾಗಿಲ ಮಾತ್ರ ಇನ್ನೊಮ್ಮೆ ನೋಡಿರಿ, ಗಟ್ಟಿ ಹಾಕಿರಿ, ಅಗಳಿ ಇದ್ದರೆ ಹಾಕೇಬಿಡಿರಿ, ಇಲ್ಲಾ ಮತ್ತೇನಾದ್ರೂ ಅಡ್ಡ ಇಟ್ಟು—ಮತ್ತ ಲಗೂ ರಾಯರ್ನ ಮ್ಯಾಲೆ ಕರಕೊಂಡು—

ಶಾಮು:-(ಮೇಲೆ ಹತ್ತಿಬಂದು) ಏನಿದು, ಗೋವಿಂದಪ್ಪಾ, ಆಗೇದೇನು? ಅಲ್ಲ, ಮನೀಗೆ ಬಂದಮ್ಯಾಲ ಈ ಹೆದರಿಕೆ-(ಗೋವಿಂದಪ್ಪನು ಅವನ ಮಾತಿನ ಕಡೆ ಲಕ್ಷ್ಯವಿಲ್ಲದವನಂತೆ ಬಲಬದಿಯ ತುದಿಗೆ ಹೋಗಿ ಕೇಳಿದಂತೆ ಮಾಡಿ, ಮೆಲ್ಲನೆ ಶಾಮುನ ಹತ್ತಿರ ನಡೆದು ಬಂದು-)

ಗೋವಿಂದಪ್ಪ:-(ಶಾಮುನ ಕಿವಿಯೊಳಗೆ) ನೂರಾರು ಜನರ ತಂಡ ವೊಂದು ಈ ಕಡೇನೇ ಹೊರಟದೆ, ದಾರೀವಳಗ ಬರೋವಾಗ ನೋಡಿದಿವಿ; ಡಾಕ್ಟರರ ಮೋಟಾರು ಅಂತ ಒಳಗ ನಾವಿದ್ದ ಸಂಶಯ ಅವರಿಗೆ ಬರಲಿಲ್ಲ; ಕೈಯೊಳಗೆ ಹಿಲಾಲ ಹಿಡದಾರ, ಕಲ್ಲು ಬೀಸತಾ ಇದ್ದಾರ—

ಶಾಮು:-(ತಿರಸ್ಕಾರದಿಂದ) ಪಶು! ಶುದ್ಧ ವನ್ಯಪಶು! ಎಲ್ಲಿಗೆ ಅಂತ ಹೊರಟಿದೆಯೊ?

ಗೋವಿಂದಪ್ಪ:-(ಇನ್ನೂ ಮೆಲ್ಲಗೆ) ''ಜಯರಾಯನ್ನ ಜಡೀರಿ'' ಅಂತ ಕೂಗತಾ ನಡೆದಾರೆ!

ಶಾಮು:-(ಬೆರಗಾಗಿ) ಆಂ?

ಗೋವಿಂದಪ್ಪ:-(ಮತ್ತೆ ಬಲಬದಿಯ ಕಡೆ ನಡೆಯುತ್ತ) ಅದ್ಕೇ ರಾಯರ್ನ ಇಲ್ಲಿಯೆ ಸುರಕ್ಷಿತ ಕೂಡಿಸೋಣ, ಸುತ್ತಲೂ ನಾವು ಕಾವಲು ನಿಲ್ಲೋಣ (ಇದನ್ನ ಹೇಳುತ್ತ ನಡೆದಾಗ ಅವನು ಲಕ್ಷ್ಯವಿಲ್ಲದೆ ಎರಡೂ ತೋಳ್ಗಳನ್ನು ಏರಿಸುತ್ತಿರುವನು.)

[ಶಾಮು ಏನನ್ನೋ ಮಾತನಾಡಬೇಕೆಂದೆಣಿಸಿ, ಒಮ್ಮೆಲೆ ತಡೆದು, ಒಂದೆರಡು ಹೆಜ್ಜೆ ಸಾವಕಾಶವಾಗಿ ಪಾವಟಿಗೆಗಳತ್ತ ನಡೆದು, ಕೂಡಲೆ ಅವಸರವಸರವಾಗಿ ಕೆಳಗೆ ಓಡುವನು]

ಗೋವಿಂದಪ್ಪ:-(ಒಂದೇಸವನೆ ಬಲಬದಿಗೆ ದಿಟ್ಟಿಸುತ್ತ ಹಿಂಬದಿಗೆ ಸರಿಯುತ್ತ, ತನ್ನಷ್ಟಕ್ಕೆ ಎಂಬಂತಹ ದನಿಯಲ್ಲಿ, ಆದರೆ ಬಂದ ಸಿಟ್ಟನ್ನು ತಡೆಯುತ್ತ) ''ಜಯರಾಯರಿಗೆ ಜಡೀರಿ'' ಅಂತ! ಬರ್ಲಿ, ಯಾವನ ಧೈರ್ಯ ಇದೆ? ಕೃತಘ್ನರು! ಕುಲಗೇಡಿಗಳು! ಮೊದಲು ಈ ಗೋವಿಂದಪ್ಪನ್ನ ದಾಟಲಿ ಆಮ್ಯಾಲೆ—(ಒಮ್ಮೆಲೆ ತಡೆದು-ಗಾಬರಿಯಿಂದ ಅತ್ತಿತ್ತ ನೋಡಿ) ಎಲ! ಘಾತ ಆಯ್ತು! ಇವರು ಇದಕ್ಕೂ ಹಿಂದ್ಮುಂದ ನೋಡವರಲ್ಲ! (ಎಂದವನೆ ಕೆಳಗೆ ಧಾವಿಸತೊಡಗುವನು. ಇಷ್ಟರಲ್ಲಿ ಮೊದಲನೆಯ ಅಂಕದಲ್ಲಿ ಕೇಳಿದ ಹಾರ್ನದ ಸದ್ದಾಗಲು ಒಮ್ಮೆಲೆ ಬಲಬದಿಯ ತುದಿಗೆ ಬಂದು ಹಣಿಕಿಕ್ಕಿ ನೋಡಿ) ಇವ ಬಂದನ? (ಎನ್ನುತ್ತ ಮತ್ತೆ ಕೆಳಗೆ ಧಾವಿಸುವನು.)

[ಆಮೇಲೆ ''ನಿಂನ್ದೇನು ತಪ್ಪು? ಯಾರಂದ್ರು ನಿನ್ನ ತಪ್ಪು ಅಂತ" ಎನ್ನುತ್ತ ಜಯರಾಯರು ವೆಂಕಣ್ಣನ ಕೈ ಹಿಡಿದು ಮೆಲ್ಲನೆ ಪಾವಟಿಗೆಗಳನ್ನು ಹತ್ತಿ ಬರುವರು. ಅವರ ವೇಷ ಅಸ್ತವ್ಯಸ್ತವಾಗಿದೆ. ತೊಟ್ಟ ಬಿಳಿಕೋಟದ ಎಡಬದಿಗೆ ದವಡೆಯಿಂದ ಇಳಿದ ರಕ್ತ ಕೆಂಪುಗಟ್ಟಿದೆ; ಬಾಯಿಯ ಎಡದ ತುದಿಗೆ ಒಂದು ಪಟ್ಟಿಯ ಕತ್ತರಿ ಇದೆ, ಬಲಬದಿಯ ತೋಳು ನೆಲಕ್ಕೆ ಬಿದ್ದಾಗ ಮಣ್ಣಿಗೆ ತಿಕ್ಕಿದೆ, ಬಲ ಮೊಳಕಾಲಕ್ಕೆ ಧೋತರ ಮಣ್ಣಿಗೆ ತಿಕ್ಕಿ ತುಸು ಹರಿದಿದೆ, ಅವರನ್ನೀ ವೆಂಕಣ್ಣನು ನಿಧಾನವಾಗಿ ಆರಾಮ ಖುರ್ಚಿಯ ಮೇಲೆ ಕೂಡ್ರಿಸುವನು. ಕುರ್ಚಿಯ ಹತ್ತಿರ ಬಂದು ''ನಿನ್ನ ತಪ್ಪು ಅಂತ ಯಾರಂದ್ರು'' ಎನ್ನುತ್ತ ತಿರುಗಿ ನೋಡುವರು. ಅಲ್ಲಿ ವೆಂಕಣ್ಣನ ಹೊರತು ಬೇರೆ ಯಾರೂ ಇರುವದಿಲ್ಲ-]

ಜಯರಾಯ:-(ಕೂತು ಚಕಿತನಾಗಿ) ಎಲ! ಹನ್ಮಂತಪ್ಪ ಮಾತಾಡುತ್ತಿದ್ದನಲ್ಲ ನನ್ನ ಜೋಡಿ?

ವೆಂಕಣ್ಣ:-ಬರ್ತಾನ, ಕೆಳಗ ರಂಗಮ್ಮಾ ಅವರ ಕೂಡ ಮಾತಾಡ್ತಾ ನಿಂತಿರಬೇಕು.

ಜಯರಾಯ:-(ಮೊದಲು ಸುಮ್ಮನಿದ್ದು ಆಮೇಲೆ) ಯಾಕೊ, ವೆಂಕಣ್ಣಾ? ಸಾವಿರಮಂದಿ ಹುಚ್ಚೆದ್ದು ಹೊಡೆದಾಟ ಎಬ್ಬಿಸಿದಾಗ ಯಾರ ಮ್ಯಾಲ ತಪ್ಪು ಹೊರಿಸೋದು? ಅಂ?

ವೆಂಕಣ್ಣ:-ಆದರೆ—ಮಂಟಪಕ್ಕೆ ಉರಿ ಹಚ್ಚೋದು—ನಿಂ ಮ್ಯಾಲೆ ಕೈ ಎತ್ತೋದು—

ಜಯರಾಯ:-(ನಕ್ಕದಕ್ಕೆ ನೋವಾದ ಮುದ್ರೆಯಿಂದ) ಹುಚ್ಚ ಇದ್ದೀ,

ವೆಂಕಣ್ಣಾ. ಮಂಟಪ ಏನೂ ನನ್ನ ಸ್ವಂತದ್ದಲ್ಲ, ನಾನೇನೂ ಊರಿಗೆ ಒಬ್ಬನೇ ದೊಡ್ಡ ಮನಸ್ಯಾ ಅಲ್ಲ!–

ಜಯರಾಯ:-(ಉಸುರ್ಗರೆದು) ವೆಂಕಣ್ಣಾ, ಈ ಹೊತ್ತಿನಿಂದ ನಂ ದೇಶದ ಆತ್ಮ ಸಂಯುಮಾನೇ ಹೋಯಿತು. ಈ ಹೊತ್ತು ಈ ಗದ್ದಲ ದೊಳಗ ನನ್ನ ಜೀವ ಹೋಗಿದ್ದರ ನನಗ ಆನಂದ ಇತ್ತು-

ವೆಂಕಣ್ಣ:-ಛೀ, ಛೀ! ಇದೇನು, ರಾಯರ—?

ಜಯರಾಯ:-(ತನ್ನಷ್ಟಕ್ಕೆ ಎಂಬಂತೆ) ಹಿಂದೊಮ್ಮೆ ಹೇಳಿದ್ದೆ ನಿನಗೆ, ನಮ್ಮಂಥವರ ಕಾಲ ಮುಗೀತು ಅಂತ. ವೆಂಕಣ್ಣಾ, ನನಗೆ ಮುದಿ ಹುಚ್ಚು ಹಿಡೀತು ನೋಡು. ಹಿತ ಇದ್ದದ್ದೆಲ್ಲ ಒಳಿತು ಅಂತ ತಿಳಿದೆ; ಅದು ತಪ್ಪು, ಬೇಕು ಅನ್ನಿಸಿದ್ದಷ್ಟೇ ಒಳ್ಳೆಯದು...ಹುಂ...ಬ್ಯಾಡಾದ ಕೆಲಸ ಮಾಡಲಿಕ್ಕೆ ಹೋದೆ—

ವೆಂಕಣ್ಣ:-(ತ್ವೇಷದ ದನಿಯಲ್ಲಿ) ಬ್ಯಾಡಾದ ಕೆಲಸ? ಯಾವ ಕೆಲಸ ಬ್ಯಾಡಾದದ್ದು?

ಜಯರಾಯ:-(ಅವನನ್ನು ದಿಟ್ಟಿಸಿ) ಅದನ್ನ ಯಾರು ಹೇಳುವವರು? ಗಣರಾಜ್ಯ. ಗುಣರಾಜ್ಯ ಅಲ್ಲ. ಪ್ರಜಾಪ್ರಭುತ್ವ. ಅವರು ಹೇಳಿದ್ದೇ ನಿರ್ಣಯ. (ಮತ್ತೆ ನೋವಾದರೂ ನಕ್ಕು) ಮುದುಕಗ ತಿಳೀಲಿ ಅಂತ, ದವಡೆಗೆ ಒಂದೇಟ ಕೊಟ್ಟು ಹೇಳಿದರು.

[ಪಾವಟಿಗೆಗಳ ಮೇಲೆ ''ನಿನಗೇನ್ಮಾಡೋದು? ನಡೀ ಮುಂದೆ!'' ಎಂದು ಗೋವಿಂದಪ್ಪನ ದನಿಯನ್ನು ಕೇಳಿ ಇಬ್ಬರೂ ತಡೆದು ಆ ಕಡೆ ನೋಡು ವರು. ಮುಂದೆ ಹನ್ಮಂತಪ್ಪ, ಹಿಂದೆ ಗೋವಿಂದಪ್ಪ ಮೇಲೇರಿ ಬರುವರು. ಗೋವಿಂದಪ್ಪನ ಎರಡೂ ಕೈಗಳಲ್ಲಿ ಎರಡು ನೀರಿನ ಬಕೆಟ್ ಇವೆ.]

ಹನ್ಮಂತಪ್ಪ:-(ಮುಂದೆ ಬಂದು) ಏನಾಗೇದ ಗೋವಿಂದಪ್ಪಗ? ''ನೀರಿನ ಬಕೀಟ ಮಾಳಿಗೆ ಮ್ಯಾಲ ಯಾಕ ತರತೀ'' ಅಂದ್ರ ಒಸಕ್ಕನೆ ಒದರಿದನಲ್ಲ!

ಗೋವಿಂದಪ್ಪ:-(ಬಕೆಟ್ಟುಗಳನ್ನು ಬಲ ತುದಿಗಿಟ್ಟು, ತಿರುಗಿನಿಂತು) ಏನಾಗೇದ ಅಂತೀಯಾ? (ರಾಯರನ್ನು ತೋರಿಸುತ್ತ) ಅಲ್ಲಿ ನೋಡು, ವಯ

ಸ್ಸಿನಿಂದ, ನಿಮ್ಮ ಸಲುವಾಗಿ ದುಡಿದ ದಣಿವಿನಿಂದ ಹಣ್ಣಾದ ಆ ಮುದಿಜೀವ ವನ್ನು ಹೊಡೆದು ಹಾಕಲಿಕ್ಕೆ ಕೈ ಎತ್ತಿದ ಕಠೋರ, ಕೃತಘ್ನ, ಕಟುಕರು ಈ ಊರೊಳಗಿರುವಾಗ—

ಹನ್ಮಂತಪ್ಪ:-(ನಡುವೆಯೆ) ಎಲ! ಎಲ! ಯಾರ ವ್ಯಾಲ ಹರಿ ಹಾಯ್ತ್ರೀ, ಗೋವಿಂದಪ್ಪಾ? ಇದೇ ಈಗ ಸುದ್ದಿ ಹತ್ತಿತು, ಕೇಳಿದವನೆ ಗಾಡಿ ಹತ್ತಿಕೊಂಡು—

ಜಯರಾಯ:-(ನಡುವೆಯೆ) ನಿಮ್ಮೆಲ್ಲಾರ ರಾಜೀನಾಮೆ ಪತ್ರ ಮುಟ್ಟಿ ದುವು.

ವೆಂಕಣ್ಣ:-(ಬೆರಗಾಗಿ) ಎಲ! ಇದೇನು? ಯಾರು—ಯಾವ-ಏನಿದು ಸುದ್ದಿ?

ಜಯರಾಯ:-ನಿನಗಿನ್ನೂ ಗೊತ್ತಿಲ್ಲ, ವೆಂಕಣ್ಣಾ. ಈ ಹೊತ್ತು-ಅಥವಾ ನಿನ್ನೇ ಅನ್ನು-ಮುಂಜಾನೆ ಹನ್ಮಂತಪ್ಪ ಎಲ್ಲಾರ ಸಹಿ ಕೂಡಿಸಿ ಒಂದು ರಾಜೀನಾಮೆ ಪತ್ರ ತಂದು ಕೊಟ್ಟಾನ. ಈಗ ಮ್ಯುನಸಿಪಾಲಿಟಿ ವಳಗ ನಾ ವಬ್ಬನೇ.

ಹನ್ಮಂತಪ್ಪ:-(ರಾಯರ ಎಡಬಡಿಗೆ ಬಂದು) ತಪ್ಪು ತಿಳಕೋಬ್ಯಾಡರಿ. ನೀವು ಹೀಂಗ ತಿಳೀತೀರಿ ಅಂತ ಅನ್ನಿಸಿ ನಾ ಮತ್ತೆ ಮಂದೀನ್ನ ಕೂಡಿಸಿ ಹೇಳಿದೆ, ಎಲ್ಲಾರೂ ರಾಜೀನಾಮೆ ತಿರಗಿ ತಕ್ಕೋತಾರ. ಖರೇ ಅಂದ್ರ ನಿಮಗ ಕೆಲಸದ ತ್ರಾಸ ಭಾಳ ಆಗೇದ, ಅದಕ್ಕ ನೀವು ವಿಶ್ರಾಂತಿ ತಕ್ಕೊಂಡರ—

ಜಯರಾಯ:-(ನಡುವೆಯೆ) ಅಂದ್ರೀಗ ನಾನು ರಾಜೀನಾಮೆ ಕೊಡ ಬೇಕೂ ಅಂತ ಹೌದಲ್ಲೋ?

ಗೋವಿಂದಪ್ಪ:-ಇಲ್ಲದಿದ್ದರೆ ಮನೆಗೆ ಬೆಂಕಿ ಹಚ್ತಾರ.

ಹನ್ಮಂತಪ್ಪ:-(ಚಕಿತನಾಗಿ) ಏನಂದಿ?

ವೆಂಕಣ್ಣ:-(ಹೌಹಾರಿದವನಂತೆ) ಮನೆಗೆ ಬೆಂಕಿ?

ಜಯರಾಯ:-ಆವಕೇ ಗೋವಿಂದಪ್ಪ ಒಂದೊಂದು ಬಕೀಟ ತಂದಿಡ್ತಾ

ಇದ್ದಾನ. ಹಾದೀವಳಗ ನನ್ನ ಲಕ್ಷ್ಯಕ್ಕ ಬರ್ಲಿಲ್ಲ ಅಂತ ತಿಳದೀ ಏನು, ಗೋವಿಂದಪ್ಪ? "ಜಯರಾಯನ್ನ ಜಡೀರಿ" ಅಂತ ಉರಿಯೋ ದೀವಟಗೆ ಹಿಡಿದುಕೊಂಡು ಹೊರಟದ ಜನ!

ಹನ್ಮಂತಪ್ಪ:-ಅದೇನ್ಮಾಡ್ತೀರಿ? ಹುಂಬರ ಕೆಲಸ ಅದು. ನಾನೂ ಬರುವಾಗ ನೋಡಿದೆ, ಅವರನ್ನ ಹಿಡಿದು ಬೈದೆ, ತಿರುಗಿ ಹೊರಟರು—

ಗೋವಿಂದಪ್ಪ:-(ನಡುವೆಯೆ) ಅಂತೂ ಹನ್ಮಂತಪ್ಪನ ಮಾತು ಕೇಳೋ ಜನಾ ಅದು?

ಹನ್ಮಂತಪ್ಪ:-(ಒಮ್ಮೆಲೆ ಕೆರಳಿ ಗೋವಿಂದಪ್ಪನಿಗೆ) ಅಂದ್ರ ನೀ ಏನನ್ನ ಬೇಕಂತೀದಿ? ಮನೆ ಸುಡೋವರನ್ನ ಬೈದು ಕಳಿಸಿದ್ದಕ್ಕ ಈ ಉಪಕಾರೇನು? (ರಾಯರಿಗೆ) ರಾಯರ, ನನಗನಿಸತದ ನೀವು ರಾಜೀನಾಮೆ ಕೊಡೋದೇ—

ಜಯರಾಯ:-(ನಡುವೆಯೆ) ನಾನು ಕೊಡದಿದ್ದರೆ?

ಹನ್ಮಂತಪ್ಪ:-(ಒಂದು ನಿಮಿಷ ಚಕಿತನಾಗಿ) ಕೊಡದಿದ್ರ?...ಅಲ್ಲ, ಅಂದ್ರ, ಕೊಡದಿದ್ರ ನಮ್ಮಂಥವರ ಕೈ ಕಟ್ಟಿತೀರಿ, ನಾವು ನಿಮಗ ಉಪಕಾರ ಮಾಡಬೇಕಂತೀವಿ—

ಗೋವಿಂದಪ್ಪ:-(ಸಂತಾಪದಿಂದ) ಏ—ಯಾರ ಮ್ಯಾಲೆ ನಿನ್ನ ಉಪಕಾರ- (ಎಂದು ಏರಿ ಬರುವಾಗ)

ಜಯರಾಯ:-(ಎದ್ದು ಅವನನ್ನು ತಡೆದು) ಸುಮ್ಮನಿರು, ಗೋವಿಂದಪ್ಪಾ...(ಹನ್ಮಂತಪ್ಪನಿಗೆ) ನಾನು ರಾಜೀನಾಮೆ ಕೊಡೋದಿಲ್ಲ.

ಹನ್ಮಂತಪ್ಪ:-(ಸಿಡುಕಿನಿಂದ) ಅಂದ್ರ?

ಜಯರಾಯ:-(ತಿಳಿಸಿ ಹೇಳುವವರಂತೆ) ನಾ-ನು-ರಾ-ಜೀ-ನಾ-ಮೆ ಕೊ-ಡೋ-ದಿ-ಲ್ಲ.

ಹನ್ಮಂತಪ್ಪ:-(ಉದಾಸೀನನಂತೆ) ಬಿಡಿರಿ; ನಿಂ ಹೊತ್ತುಗ ಒಂದು ಪಿಳ್ಳೆ ಉಳಿಯೋದಿಲ್ಲ ಮ್ಯುನಸಿಪಾಲಿಟಿ ವಳಗ, ನೀವು ಬಿಡದಿದ್ದರೆ.

ವೆಂಕಣ್ಣ:-(ತಿರಸ್ಕಾರದಿಂದ) ಇಲ್ಲದಿದ್ದರೆ ಇಲ್ಲ, ತಂ ಕೆಲಸ ತಾವೊ

ಬ್ಬರೆ ನೀಗಿಸುವಷ್ಟು ಸಮರ್ಥರಿದ್ದಾರ ರಾಯ್ರು.

ಹನ್ಮಂತಪ್ಪ:-(ಸಿಟ್ಟಿನಿಂದ) ಹುಚ್ಚೊಗ್ಗಿಟ್ಟಿ ಇದ್ದೀ-ನೀ, ಯೆಂಕಣ್ಣಾ! ಅಲ್ಲ, ಪೇಪರದಾಗ ಬರೀತೀ ಮ್ಯಾಲೆ ಇಂಥಾ ಮಾತಾಡ್ತೀ! "ಸಮರ್ಥರಿದ್ದಾರಂತ"! ಯಾರಿಗೆ ಹೇಳ್ತಿ ಇದನ್ನ? ಎಂಥಾ ದೊಡ್ಡ ಮನಸ್ಯಾ ಆದ್ರೂ ಪಾರ್ಟಿ ಮಾಡಿಕೊಳ್ಳದೆ ಒಂದು ಕಡ್ಡಿ ಎತ್ತಿಡೋದು ಆಗೋದಿಲ್ಲ, ಗೊತ್ತದನ? ಪಾರ್ಟಿ ಕೈ ಬಿಟ್ಟಿತು ಅಂದ್ರ ಯಾರು ಎಷ್ಟು ದೊಡ್ಡ ಮನಸ್ಯಾ ಅಂಬೋದು ತಿಳಿಯೋದಿಲ್ಲ?

ರಂಗವ್ವ:-(ಒಮ್ಮೆಲೆ ಮೇಲೆ ಬಂದು) ಹೊಗೊ, ರಂಡೇಗಂಡಾ, ನೀನೂ ನಿನ್ನ ಪಾರ್ಟಿ! ಕಟ್ಟಿಕೊಂಡು ಭಾವಿವಳಗ ಹಾರಿಕೊ! (ಜಯರಾಯರು ತಡೆಯಬೇಕೆಂದರೂ ಕೇಳದೆ) ಉಪದೇಶ ಮಾಡಲಿಕ್ಕೆ ಬಂದಾನ! ಪಾರ್ಟಿ ಅಂತ ಪಾರ್ಟಿ! ನಿಂದೇ ದೊಡ್ಡಸ್ತನ ಆದ್ರ ಅದು ಪಾರ್ಟಿ, ಅಲ್ಲೇನು? ಅಯ್ಯ! ನಿನ್ನ ಬುದ್ಧಿವಂತಿಕೆ! ಒಬ್ಬರೊಬ್ಬರಿಗೆ ಅಡ್ಡ ಬರಬಾರ್ದು ಅಂತ ನಾಲ್ಕು ಮಂದಿ ಕವಡುಗಂಟಕರು ಕೂಡ್ತಾರ, ಅದೊಂದು ಪಾರ್ಟಿ ಅಂತ! ಹೋಗು, ನೀಬ್ಯಾಡಾ—ನಿನ್ನ ಪಾರ್ಟಿ ಬ್ಯಾಡಾ!

ಹನ್ಮಂತಪ್ಪ:-(ಬಂದ ಸಿಟ್ಟನ್ನು ತಡೆಯುತ್ತ) ರಂಗವ್ವಾ, ಇದು ರಾಜಕಾರಣ—

ರಂಗವ್ವ:-(ನಡುವೆಯೆ) ಅದಕ್ಕ ಹೆಂಗಸರು ಇದರಾಗ ಸೇರಬಾರ್ದು ಅಂತೀ ಏನು? ಹಿಂದಕ ಜೇಲಿಗೆ ಹೋಗೋ ರಾಜಕಾರಣದಾಗ ಹೆಂಗಸರು ಸೇರಬೇಕು ಅಂತ ಗಂಟಲ ಹರಕೊಳ್ಳತಿದ್ದಿರಲ್ಲ? ನನಗೊತ್ತದ, ರಾಜಕಾರಣ ಅಂದ್ರ ಸ್ವಂತದ ಕೆಲಸ ಸಾಧಿಸಿಕೊಳ್ಳೋದು! ನಿಮ್ಮಂತಹರಿಗೆ ಅಷ್ಟು ಬುದ್ಧಿ ಇದ್ದರೆ (ಗಂಡನನ್ನು ತೋರಿಸಿ) ಇಂತಹರಿಗೆ ಈ ಸ್ಥಿತಿ ಬರತಿದ್ದಿಲ್ಲ; ರಾಜಕಾರಣ ಅಂತ.

ಜಯರಾಯ:-(ಆಶ್ಚರ್ಯ ತೋರಿಸಿ) "ಇಂತಹರಿಗೆ ಈ ಸ್ಥಿತಿ" ಅಂದ್ರ? ನನಗೇನಾಗೇದ?

ರಂಗವ್ವ:—ಒಬ್ಬೊಂಟಿಗರಾಗಿ ಉಳಿದಿರಲ್ಲ—

ಜಯರಾಯ:—(ಆಶ್ಚರ್ಯದಿಂದ) ಒಬ್ಬೊಂಟಿಗ! ನಾನು ಒಬ್ಬೊಂಟಿಗ! ಜೀವಕ್ಕ ಜೀವ ಕೊಡಲಿಕ್ಕೆ ತಯಾರ ಇದ್ದ (ಗೋವಿಂದಪ್ಪನನ್ನು ತೋರಿಸುತ್ತಾ) ಇಂತಹ ಗೆಳೆಯ, ವಿಶ್ವಾಸದಿಂದ ದುಡೀಲಿಕ್ಕೆ ತಯಾರಿದ್ದ (ವೆಂಕಣ್ಣನನ್ನು ತೋರಿಸುತ್ತ) ಇಂತಹ ತರುಣರು; ಸೋತು ಹಣ್ಣಾದೆ ಅನ್ನಿಸಿದಾಗ ಹುರಿದುಂಬಿಸಿ ಎಬ್ಬಿಸೋ (ಆಕೆಯನ್ನು ದಿಟ್ಟಿಸುತ್ತಾ) ಇಂತಹ ಹೆಂಡತಿ—ಇವರೆಲ್ಲಾರೂ ನನ್ನ ಸುತ್ತಲಿರುವಾಗ ನಾನು ಒಬ್ಬೊಂಟಿಗನ?

ಹನ್ಮಂತಪ್ಪ:-ರಾಯರ, ಇದೆಲ್ಲ ಮಾತಿನ ಸುಖ ಆಯ್ತು; ಆದ್ರೆ ನಾ ಹೇಳ್ತೀನಿ ಕೇಳಿರಿ, ಈಗ ನೀವು ಬಿಡದಿದ್ದರೆ ಯಾರಿಗೂ ಸುಖ ಇಲ್ಲ-ಇಷ್ಟ್ಯಾಕ?—ನಿಮಗೇ ಸುಖ ಇಲ್ಲ—

ವೆಂಕಣ್ಣ:-(ನಡುವೆಯೆ) ಅವರಿಗೆ ಸುಖ ಇಲ್ಲ! (ತಿರಸ್ಕಾರದಿಂದ) ಅಂಥವರಿಗೆ ಯಾವದು ಸುಖ ಅನ್ನೋದು ನಿನಗೇನು ತಿಳಿದೀತು?

ಹನ್ಮಂತಪ್ಪ:—(ಆಶ್ಚರ್ಯದಿಂದ) ಅಂತಹರಿಗೆ ಅಂದ್ರ? ಅವರೂ ನಮ್ಹಾಂಗ ಮನುಷ್ಯರು ಅಂತ ತಿಳಿದು ಹೇಳ್ತೀನಿ—

ರಂಗಮ್ಮ:—(ಅತ್ಯಂತ ತಿರಸ್ಕಾರದಿಂದ) ನಿನ್ನ ಹಾಂಗ? ಅಯ್ಯಯ್ಯ!

ಗೋವಿಂದಪ್ಪ:-(ಅದೇ ಭಾವನೆಯಿಂದ) ನಿನ್ನ ಹಾಂಗ! ಹಹ! ತನ್ಹಾಂಗ ಅಂತ!

ವೆಂಕಣ್ಣ:-(ಚಕಿತನಾಗಿ) ನಿನ್ನ ಹಾಂಗ!

[ಮೂವರೂ ಮೇಲಿನಂತೆ ಮಾತಾಡುವಾಗ ಹನ್ಮಂತಪ್ಪನು ಹೆಚ್ಚೆಚ್ಚು ಪೆಚ್ಚು ಕಳೆಯಿಂದ ಒಬ್ಬೊಬ್ಬರನ್ನು ನೋಡುವನು.]

ಹನ್ಮಂತಪ್ಪ:-(ಉಗುಳ್ನುಂಗುತ್ತಾ) ಅಲ್ಲ—ಅಂದ್ರ—ಮತ್ತ ಎಂಥವರು ಅಂತ—ಅಲ್ಲ—

[ಒಮ್ಮೆಲೇ ದೂರದಿಂದ ಕೆಳಗಿನ ನುಡಿ ಕೇಳ ಬರುವದು.]

"ಸಮದೃಷ್ಟೀನೆ ತೃಷ್ಣಾ ತ್ಯಾಗಿ
ಪರಸ್ತ್ರೀ ಜೇನೇ ಮಾತರೇ

ಜಿವ್ಹಾ ಥಕೀ ಅಸತ್ಯನ ಬೋಲೇ
ಪರಧನ ನ ವಝಾಲೆ ಹಾಥರೇ

(ಅದು ಮುಗಿಯುವಾಗ ಎಲ್ಲರೂ ಸ್ತಬ್ಧರಂತೆ ನಿಂತಿರಲು-)

ಶಾಮು:-(ಮೇಲೆ ಬಂದು) ತಿಳೀತೇನು, ಹನ್ಮಂತಪ್ಪಾ?

(ಹನ್ಮಂತಪ್ಪನು ಪೆಚ್ಚ ಕಳೆಯಿಂದಲೆ ತಲೆ ಅಲ್ಲಾಡಿಸುವನು)

(ಮತ್ತೆ ದೂರದಿಂದ

''ವೈಷ್ಣವ ಜನತೋ ತೇನೇ ಕಹಿಯೇ
ಜೇ ಪೀಡ ಪರಾಯಿ ಜಾಣೇರೇ'']

ಶಾಮು:-(ಆಪ್ತನಂತೆ ಮೆಲ್ಲನಿಯಲ್ಲಿ)ಇನ್ನೂ ತಿಳಿದಿಲ್ಲ ಅಂದ್ರ ಲಕ್ಷ್ಯ ಗೊಟ್ಟು ಕೇಳು—

''ಪರದುಃಖೇ ಉಪಕಾರ ಕರೇ ತೊಯೆ
ಮನ ಅಭಿಮಾನ ನ ಆಣೇರೆ''

[ಈ ಸಾಲುಗಳು ಕೇಳ ಬರುವಾಗ ಜಯರಾಯ-ಹನ್ಮಂತಪ್ಪ ಇಬ್ಬರನ್ನುಳಿದು ಎಲ್ಲರೂ ಬೇರೆ ಬೇರೆ ಕಡೆ ಮುಖ ತಿರುಗಿಸಿ ನಿಂತು ದೂರ ನೋಡುತ್ತಿದ್ದಾರೆ. ಮುಗಿದ ಮೇಲೂ ಅವರು ಹಾಗೇ ನಿಂತಿದ್ದಾರೆ. ಜಯರಾಯನು ಮಾತ್ರ ಮುಖವನ್ನೆತ್ತಿ ಕರುಣಾಮಯ ದೃಷ್ಟಿಯಿಂದ ಹನ್ಮಂತಪ್ಪನನ್ನು ನೋಡುವನು. ಒಂದು ನಿಮಿಷ ಹನ್ಮಂತಪ್ಪನು ಮಂತ್ರಮುಗ್ಧನಂತೆ ಅವರನ್ನೇ ದಿಟ್ಟಿಸುತ್ತ ನಿಲ್ಲುವನು. ಕೊನೆಗೆ ಒಮ್ಮೆಲೆ ತಲೆ ಹಿಡಿದುಕೊಂಡು—]

ಹನ್ಮಂತಪ್ಪ:—ಥೂ—ಇದೇನೊ ಮಾಟ ಮಾಡಿದ್ಹಾಂಗ—

ಶಾಮು:-(ಓಡುತ್ತ ಬಂದು) ಯಾಕೊ–ಹನ್ಮಂತಪ್ಪ-ಏನಾಯ್ತು?-ಎಲ—! ಬಿದ್ದೀ—(ಎನ್ನುತ್ತ ಹಿಡಿಯುವಾಗ)

ಹನ್ಮಂತಪ್ಪ:-(ತಲೆ ಹಿಡಿದುಕೊಂಡೇ) ತಲೆಗೆ ಚಕ್ರ ಬಂದ್ಹಾಂಗೆ ಆಗೇದ—ಥೂ

ಶಾಮು:- ತಲೆಗೆ ಅಲ್ಲ—ಮುಂದೆ. ನಿನ್ನ ಕಣ್ಮುಂದೆ ನಿಂತಿದೆ ಚಕ್ರ, ಕಣ್ಣು ತೆಗೆದು ನೋಡು—

ಹನ್ಮಂತಪ್ಪ:-(ಗಾಬರಿಯಾಗಿ) ಆಂ ? ಚಕ್ರ ? ಯಾವ ಚಕ್ರ ?

ಶಾಮು:- ಶೋಕಚಕ್ರ-(ಬಾಯ್ದೆರೆದ ಹನ್ಮಂತಪ್ಪನಿಗೆ ಕೈ ಸನ್ನೆಯಿಂದ ತಡೆಯಲು ಸೂಚಿಸುತ್ತಾ)—ಮನುಷ್ಯನ ಹೃದಯ ಸಾಮ್ರಾಜ್ಯದ ರಾಷ್ಟ್ರ ಧ್ವಜದಂತಿದ್ದ-

## ಶೋಕಚಕ್ರ

[ದೂರದಿಂದ ಮತ್ತೆ,

“ಪರದುಃಖೇ ಉಪಕಾರ ಕರೆ ತೊಯೆ
ಮನ ಅಭಿಮಾನ ನ ಆಣೇರೆ”

ಎಂದು ಕೇಳ ಬರುವಾಗ ಖಿಕ್ಕಪರು ಸೊಲ್ಲಗೆ ಜಯರಾಯನ ಕಡೆ ನಡೆದು ಬರುತ್ತಿರುವರು. ಅವರ ಹೆಜ್ಜೆಗೆ ತಾಳ ಹಿಡಿದಂತೆ-]

[ ತೆರೆ ]

— ೦ —

# ಶೋಕಚಕ್ರ

## ತಿದ್ದುಪಡಿ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 10 | 3 | ಮುಳ್ಳು | ಮುಳ್ಳ |
| 11 | 23 | ಮೋತಿಯೊಳಗಿನ | ಮಾರಿಯೊಳಗಿನ |
| 15 | 14 | ರಕ್ತಿವರ್ಣದ | ರಕ್ತವರ್ಣದ |
| 21 | 13 | ಮಹಾತ್ಮಿಜಿ | ಮಹಾತ್ಮಾಜಿ |
| 21 | 18 | ನಮೆಲ್ಲರಿಗೆ | ನಮ್ಮೆಲ್ಲರಿಗೆ |
| 26 | 21 | That's the inner srory my boy! | 'story' ಯ ನಂತರ , |
| 29 | 1 | ಇಷ್ಟುರಾಗೆ | ಇಷ್ಟರಾಗೆ |
| 34 | 1 | ಏಲ್ಲಾರೂ | ಎಲ್ಲಾರೂ |
| 39 | 10 | ಎಲ್ಯಾದರೂ | ಎಲ್ಲಾದಕೂ |
| 60 | 1 | ಬರೋಬರ | ಖರೋಖರ |
| 63 | 15 | ತುಂಬಿ | ಕುಂಬಿ |
| 85 | 2 | ನೇ ಪಂಕ್ತಿ ಆದ ನಂತರ ಕೆಳಗಿನ ಮಾತು ಸೇರಿಸ ಬೇಕು:— | |

ವೆಂಕಣ್ಣ:—ಅಲ್ಲಾ-ಹಾಂಗ ತಿಳಿದವರಿದ್ದಾರ-ಅದಕ್ಕೆ-ಸಂಶಯ.

——O——

